| | | |
|---|---|---|
| (ಎ) | ನಾಮಪತ್ರಗಳನ್ನು ಸಲ್ಲಿಸಲು ಕೊನೆಯ ದಿನಾಂಕ ಮತ್ತು ದಿನ | **19-02-2014 (ಬುಧವಾರ)** |
| (ಬಿ) | ನಾಮಪತ್ರಗಳನ್ನು ಪರಿಶೀಲಿಸುವ ದಿನಾಂಕ ಮತ್ತು ದಿನ | **20-02-2014 (ಗುರುವಾರ)** |
| (ಸಿ) | ಉಮೇದುವಾರಿಕೆಗಳನ್ನು ಹಿಂತೆಗೆದುಕೊಳ್ಳಲು ಕೊನೆಯ ದಿನಾಂಕ ಮತ್ತು ದಿನ | **22-02-2014 (ಶನಿವಾರ)** |
| (ಡಿ) | ಮತದಾನ ಅವಶ್ಯವಿದ್ದರೆ, ಮತದಾನವನ್ನು ನಡೆಸಬೇಕಾದ ದಿನಾಂಕ, ದಿನ ಮತ್ತು ಸಮಯ | **02-03-2014 (ಭಾನುವಾರ) ಬೆಳಿಗ್ಗೆ 7.00 ಗಂಟೆಯಿಂದ ಸಾಯಂಕಾಲ 5.00 ಗಂಟೆಯವರೆಗೆ** |
| (ಇ) | ಚುನಾವಣೆಯನ್ನು ಯಾವ ದಿನಾಂಕಕ್ಕೆ ಮುಂಚೆ ಮುಕ್ತಾಯಗೊಳಿಸಬೇಕೋ ಆ ದಿನಾಂಕ ಮತ್ತು ದಿನ | **05-03-2014 (ಬುಧವಾರ)** |

**ಎಸ್‌ಟಿ. ಅಂಜನ್‌ಕುಮಾರ್**
ಜಿಲ್ಲಾಧಿಕಾರಿ
ದಾವಣಗೆರೆ ಜಿಲ್ಲೆ

# ವಿಶೇಷ ರಾಜ್ಯ ಪತ್ರಿಕೆ

| | | |
|---|---|---|
| **ಭಾಗ - III** | **ಬೆಂಗಳೂರು, ಬುಧವಾರ, ಫೆಬ್ರವರಿ ೧೨, ೨೦೧೪ (ಮಾಘ ೨೩, ಶಕ ವರ್ಷ ೧೯೩೫)** | **ನಂ. ೧೦೨** |
| **Part - III** | **Bangalore, Wednesday, February 12, 2014 (Magha 23, Shaka Varsha 1935)** | **No. 102** |

## ಜಿಲ್ಲಾಧಿಕಾರಿಗಳ ಕಾರ್ಯಾಲಯ, ದಾವಣಗೆರೆ ಜಿಲ್ಲೆ, ದಾವಣಗೆರೆ

**ಪ್ರಪತ್ರ-2**

[12(2) ನೇ ನಿಯಮವನ್ನು ನೋಡಿ]

**ಅಧಿಸೂಚನೆ**

**ಸಂಖ್ಯೆ ರಾಚು ಸಿಆರ್.21(5)/2013-14, ದಿನಾಂಕ : 12-2-2014**

1993 ರ ಕರ್ನಾಟಕ ಪಂಚಾಯತ್ ರಾಜ್ ಅಧಿನಿಯಮದ ಉಪಬಂಧಗಳ ಮೇರೆಗೆ ದಾವಣಗೆರೆ ಜಿಲ್ಲೆ **ಹರಪನಹಳ್ಳಿ ತಾಲ್ಲೂಕಿನ** ಕೆಳಕಾಣಿಸಿದ ಗ್ರಾಮ ಪಂಚಾಯಿತಿಗಳಲ್ಲಿ ಸದಸ್ಯರ ಮರಣದಿಂದ ತೆರವಾಗಿರುವ ಸದಸ್ಯರ ಸ್ಥಾನಗಳನ್ನು ತುಂಬಲು ಚುನಾವಣೆ ನಡೆಸಬೇಕಾಗಿದೆ.

| ಕ್ರ ಸಂ | ಗ್ರಾಮ ಪಂಚಾಯಿತಿ ಸಂಖ್ಯೆ ಹಾಗೂ ಹೆಸರು | ಕ್ಷೇತ್ರದ ಸಂಖ್ಯೆ ಹಾಗೂ ಹೆಸರು | ಸ್ಥಾನಗಳ ಸಂಖ್ಯೆ | ಖಾಲಿ ಸ್ಥಾನದ ವಿವರ | ವಿವರ |
|---|---|---|---|---|---|
| 1 | 10.ಬಾಗಳಿ | 4.ಶೃಂಗಾರ ತೋಟ | 1 | **ಹಿಂದುಳಿದ ವರ್ಗ 'ಅ'** | **ಪಾಟೀಲ್ ರಾಜಾಸಾಬ್** ಬಿನ್ ಜಂಗ್ಲಿಸಾಬ್ ಇವರ ಮರಣದಿಂದ ಉಂಟಾದ ಖಾಲಿ ಸ್ಥಾನ |

ಆದುದರಿಂದ ಕರ್ನಾಟಕ ಪಂಚಾಯತ್ ರಾಜ್ (ಚುನಾವಣೆಗಳನ್ನು ನಡೆಸುವ) ನಿಯಮಗಳು 1993ರ 12ನೇ ನಿಯಮಕ್ಕನುಸಾರವಾಗಿ **ದಾವಣಗೆರೆ ಜಿಲ್ಲೆಯ ಜಿಲ್ಲಾಧಿಕಾರಿಯಾದ ಎಸ್.ಟಿ. ಅಂಜನ್‌ಕುಮಾರ್** ಎಂಬ ಹೆಸರಿನ ನಾನು ಸದರಿ ಚುನಾವಣೆಗೆ ಸಂಬಂಧಿಸಿದ ಈ ಕೆಳಕಂಡ ಕಾರ್ಯಕ್ರಮ ವೇಳಾಪಟ್ಟಿಯನ್ನು ಈ ಮೂಲಕ ನಿಗದಿಪಡಿಸುತ್ತೇನೆ.

| | | |
|---|---|---|
| (ಎ) | ನಾಮಪತ್ರಗಳನ್ನು ಸಲ್ಲಿಸಲು ಕೊನೆಯ ದಿನಾಂಕ ಮತ್ತು ದಿನ | **19-02-2014 (ಬುಧವಾರ)** |
| (ಬಿ) | ನಾಮಪತ್ರಗಳನ್ನು ಪರಿಶೀಲಿಸುವ ದಿನಾಂಕ ಮತ್ತು ದಿನ | **20-02-2014 (ಗುರುವಾರ)** |
| (ಸಿ) | ಉಮೇದುವಾರಿಕೆಗಳನ್ನು ಹಿಂತೆಗೆದುಕೊಳ್ಳಲು ಕೊನೆಯ ದಿನಾಂಕ ಮತ್ತು ದಿನ | **22-02-2014 (ಶನಿವಾರ)** |
| (ಡಿ) | ಮತದಾನ ಅವಶ್ಯವಿದ್ದರೆ, ಮತದಾನವನ್ನು ನಡೆಸಬೇಕಾದ ದಿನಾಂಕ, ದಿನ ಮತ್ತು ಸಮಯ | **02-03-2014 (ಭಾನುವಾರ) ಬೆಳಿಗ್ಗೆ 7.00 ಗಂಟೆಯಿಂದ ಸಾಯಂಕಾಲ 5.00 ಗಂಟೆಯವರೆಗೆ** |
| (ಇ) | ಚುನಾವಣೆಯನ್ನು ಯಾವ ದಿನಾಂಕಕ್ಕೆ ಮುಂಚೆ ಮುಕ್ತಾಯಗೊಳಿಸಬೇಕೋ ಆ ದಿನಾಂಕ ಮತ್ತು ದಿನ | **05-03-2014 (ಬುಧವಾರ)** |

**ಎಸ್‌ಟಿ. ಅಂಜನ್‌ಕುಮಾರ್**
ಜಿಲ್ಲಾಧಿಕಾರಿ
ದಾವಣಗೆರೆ ಜಿಲ್ಲೆ

ವಿಶೇಷ ರಾಜ್ಯ ಪತ್ರಿಕೆ

| ಭಾಗ – III<br>Part – III | ಬೆಂಗಳೂರು, ಬುಧವಾರ, ಫೆಬ್ರವರಿ ೧೨, ೨೦೧೪ (ಮಾಘ ೨೩, ಶಕ ವರ್ಷ ೧೯೩೫)<br>Bangalore, Wednesday, February 12, 2014 (Magha 23, Shaka Varsha 1935) | ನಂ. ೧೦೩<br>No. 103 |
|---|---|---|

## ಜಿಲ್ಲಾಧಿಕಾರಿಗಳ ಕಛೇರಿ, ರಾಮನಗರ ಜಿಲ್ಲೆ, ರಾಮನಗರ

**ಪ್ರಪತ್ರ–2**

**(12(2)ನೇ ನಿಯಮವನ್ನು ನೋಡಿ)**

**(ಗ್ರಾಮ ಪಂಚಾಯಿತಿಗಳಿಗೆ ಚುನಾವಣೆಗಳ ಸಂದರ್ಭದಲ್ಲಿ ಉಪಯೋಗಕ್ಕಾಗಿ)**

**ಅಧಿಸೂಚನೆ**

**ಸಂಖ್ಯೆ: ಚುನಾವಣಾ(ಪಂ)ಸಿಆರ್ 62/2013–14, ದಿನಾಂಕ: 12–02–2014**

1. 1993ರ ಕರ್ನಾಟಕ ಪಂಚಾಯತ್ ರಾಜ್ ಅಧಿನಿಯಮದ ಉಪಬಂಧಗಳ ಮೇರೆಗೆ ರಾಮನಗರ ಜಿಲ್ಲೆಯ ತಾಲ್ಲೂಕುಗಳಿಗೆ ಸಂಬಂಧಿಸಿದಂತೆ ಗ್ರಾಮ ಪಂಚಾಯಿತಿಯಲ್ಲಿ ಆಕಸ್ಮಿಕವಾಗಿ ತೆರವಾಗಿರುವ/ಸದಸ್ಯರ ಖಾಲಿ ಉಳಿದಿರುವ ಸ್ಥಾನಗಳಿಗೆ ಅನುಬಂಧದಲ್ಲಿನ ಗ್ರಾಮ ಪಂಚಾಯಿತಿಗೆ ಚುನಾಯಿತ ಸದಸ್ಯರ ಸ್ಥಾನಗಳನ್ನು ತುಂಬಲು.
2. **ಚನ್ನಪಟ್ಟಣ ತಾಲ್ಲೂಕು ರಾಂಪುರ** ಗ್ರಾಮ ಪಂಚಾಯಿತಿಯ **ಕನ್ನಮಂಗಲ ಕ್ಷೇತ್ರದಲ್ಲಿ** ಆಕಸ್ಮಿಕವಾಗಿ ತೆರವಾಗಿರುವ/ಸದಸ್ಯರ ಖಾಲಿ ಉಳಿದಿರುವ ಸ್ಥಾನಗಳಿಗೆ ಸದಸ್ಯರು ತೆರವಾದ ಸ್ಥಾನಗಳನ್ನು ತುಂಬಲು.
3. ಶ್ರೀ. ಕೆ.ಸಂಜೀವ್‌ಕುಮಾರ್ ಇವರ ರಾಜಿನಾಮೆಯಿಂದಾಗಿ ತೆರವಾಗಿರುವ ಸ್ಥಾನಕ್ಕೆ ಚುನಾವಣೆಯನ್ನು ಕಾನೂನು ಮಾನ್ಯವಲ್ಲವೆಂದು ಘೋಷಿಸಲಾಗಿರುವುದರಿಂದಾಗಿ **ಪರಿಶಿಷ್ಟ ಜಾತಿ** ಸ್ಥಾನವು ಖಾಲಿಯಾಗಿರುವುದಾಗಿ ಘೋಷಿಸಿರುವುದರಿಂದಾಗಿ ಉಂಟಾದ ಖಾಲಿ ಸ್ಥಾನವನ್ನು ತುಂಬಲು ಚುನಾವಣೆಯನ್ನು ನಡೆಸಬೇಕಾಗಿರುವುದರಿಂದ.
4. ರಾಜ್ಯ ಚುನಾವಣಾ ಆಯೋಗ, ಕರ್ನಾಟಕ, ಬೆಂಗಳೂರು ರವರ ಆದೇಶ ಸಂಖ್ಯೆ: ರಾಚುಅ/39/ಇಜಿಪಿ(2)2013, ದಿನಾಂಕ: 10–02–2014 ರಂತೆ ನೀಡಿರುವ ಚುನಾವಣಾ ವೇಳಾ ಪಟ್ಟಿಯಂತೆ, ಕರ್ನಾಟಕ ಪಂಚಾಯತ್ ರಾಜ್ (ಚುನಾವಣೆಗಳನ್ನು ನಡೆಸುವ) ನಿಯಮಗಳು 1993ರ 12ನೇ ನಿಯಮಕ್ಕನುಸಾರವಾಗಿ ರಾಮನಗರ ಜಿಲ್ಲೆಯ ಜಿಲ್ಲಾಧಿಕಾರಿ ಆದ **ಡಾ|| ಡಿ.ಎಸ್.ವಿಶ್ವನಾಥ್ ಭಾ.ಆ.ಸೇ** ಎಂಬ ಹೆಸರಿನ ನಾನು ಸದರಿ ಚುನಾವಣೆಗೆ ಸಂಬಂಧಿಸಿದಂತೆ, ಈ ಕೆಳಕಂಡ ಕಾರ್ಯಕ್ರಮ ವೇಳಾಪಟ್ಟಿಯನ್ನು ಈ ಮೂಲಕ ನಿಗಧಿಪಡಿಸಿ ಅಧಿಸೂಚನೆ ಹೊರಡಿಸಿರುತ್ತೇನೆ.

**ಚುನಾವಣಾ ವೇಳಾ ಪಟ್ಟಿ**

| | | |
|---|---|---|
| 1 | ಚುನಾವಣಾ ಅಧಿಸೂಚನೆಯ ದಿನಾಂಕ ಮತ್ತು ದಿನ | 12–02–2014 (ಬುಧವಾರ) |
| 2 | ನಾಮಪತ್ರಗಳನ್ನು ಸಲ್ಲಿಸಲು ಕೊನೆಯ ದಿನಾಂಕ ಮತ್ತು ದಿನ | 19–02–2014 (ಬುಧವಾರ) |
| 3 | ನಾಮಪತ್ರಗಳನ್ನು ಪರಿಶೀಲಿಸುವ ದಿನಾಂಕ ಮತ್ತು ದಿನ | 20–02–2014 (ಗುರುವಾರ) |
| 4 | ಉಮೇದುವಾರಿಕೆಗಳನ್ನು ಹಿಂತೆಗೆದುಕೊಳ್ಳುವ ಕೊನೆಯ ದಿನಾಂಕ ಮತ್ತು ದಿನ | 22–02–2014 (ಶನಿವಾರ) |
| 5 | ಮತದಾನ ಅವಶ್ಯವಿದ್ದರೆ, ಮತದಾನವನ್ನು ನಡೆಸಬೇಕಾದ ದಿನಾಂಕ ಮತ್ತು ದಿನ (ಬೆಳಿಗ್ಗೆ 7–00 ರಿಂದ ಸಂಜೆ 5–00 ಗಂಟೆಯವರೆಗೆ) | 02–03–2014 (ಭಾನುವಾರ) |
| 6 | ಮರು ಮತದಾನ ಅವಶ್ಯವಿದ್ದರೆ, ಮರು ಮತದಾನ ನಡೆಸಬೇಕಾದ ದಿನಾಂಕ ಮತ್ತು ದಿನ | 04–03–2014 (ಮಂಗಳವಾರ) |
| 7 | ಮತಗಳ ಎಣಿಕೆ ದಿನಾಂಕ ದಂದು ಬೆಳಿಗ್ಗೆ 8–00 ಗಂಟೆಯಿಂದ (ತಾಲ್ಲೂಕಿನ ಕೇಂದ್ರ ಸ್ಥಳದಲ್ಲಿ) | 05–03–2014 (ಬುಧವಾರ) |
| 8 | ಚುನಾವಣೆಯನ್ನು ಯಾವ ದಿನಾಂಕಕ್ಕೆ ಮುಂಚೆ ಮುಕ್ತಾಯಗೊಳಿಸಬೇಕೋ ಆ ದಿನಾಂಕ ಮತ್ತು ದಿನ | 05–03–2014 (ಬುಧವಾರ) |

**ಡಾ|| ಡಿ.ಎಸ್. ವಿಶ್ವನಾಥ್, ಭಾ.ಆ.ಸೇ**
ಜಿಲ್ಲಾಧಿಕಾರಿ
ರಾಮನಗರ ಜಿಲ್ಲೆ, ರಾಮನಗರ

# ವಿಶೇಷ ರಾಜ್ಯ ಪತ್ರಿಕೆ

| | | |
|---|---|---|
| ಭಾಗ – III | ಬೆಂಗಳೂರು, ಬುಧವಾರ, ಫೆಬ್ರವರಿ ೧೨, ೨೦೧೪ (ಮಾಘ ೨೩, ಶಕ ವರ್ಷ ೧೯೩೫) | ನಂ. ೧೦೪ |
| Part – III | Bangalore, Wednesday, February 12, 2014 (Magha 23, Shaka Varsha 1935) | No. 104 |


## ಜಿಲ್ಲಾಧಿಕಾರಿಗಳ ಕಛೇರಿ, ರಾಮನಗರ ಜಿಲ್ಲೆ, ರಾಮನಗರ

ಪ್ರಪತ್ರ–2

(12(2)ನೇ ನಿಯಮವನ್ನು ನೋಡಿ)

(ಗ್ರಾಮ ಪಂಚಾಯಿತಿಗಳಿಗೆ ಚುನಾವಣೆಗಳ ಸಂದರ್ಭದಲ್ಲಿ ಉಪಯೋಗಕ್ಕಾಗಿ)

**ಅಧಿಸೂಚನೆ**

**ಸಂಖ್ಯೆ: ಚುನಾವಣಾ(ಪಂ)ಸಿಆರ್ 62/2013–14, ದಿನಾಂಕ: 12–02–2014**

1. 1993ರ ಕರ್ನಾಟಕ ಪಂಚಾಯತ್ ರಾಜ್ ಅಧಿನಿಯಮದ ಉಪಬಂಧಗಳ ಮೇರೆಗೆ ರಾಮನಗರ ಜಿಲ್ಲೆಯ ತಾಲ್ಲೂಕುಗಳಿಗೆ ಸಂಬಂಧಿಸಿದಂತೆ ಗ್ರಾಮ ಪಂಚಾಯಿತಿಯಲ್ಲಿ ಆಕಸ್ಮಿಕವಾಗಿ ತೆರವಾಗಿರುವ/ಸದಸ್ಯರ ಖಾಲಿ ಉಳಿದಿರುವ ಸ್ಥಾನಗಳಿಗೆ ಅನುಬಂಧದಲ್ಲಿನ ಗ್ರಾಮ ಪಂಚಾಯಿತಿಗೆ ಚುನಾಯಿತ ಸದಸ್ಯರ ಸ್ಥಾನಗಳನ್ನು ತುಂಬಲು.
2. **ಚನ್ನಪಟ್ಟಣ ತಾಲ್ಲೂಕು ರಾಂಪುರ** ಗ್ರಾಮ ಪಂಚಾಯಿತಿಯ **2–ರಾಂಪುರ ಕ್ಷೇತ್ರದಲ್ಲಿ** ಆಕಸ್ಮಿಕವಾಗಿ ತೆರವಾಗಿರುವ/ಸದಸ್ಯರ ಖಾಲಿ ಉಳಿದಿರುವ ಸ್ಥಾನಗಳಿಗೆ ಸದಸ್ಯರು ತೆರವಾದ ಸ್ಥಾನಗಳನ್ನು ತುಂಬಲು.
3. ಶ್ರೀಮತಿ. ಚಂದ್ರಮ್ಮ ಇವರ ರಾಜಿನಾಮೆಯಿಂದಾಗಿ ತೆರವಾಗಿರುವ ಸ್ಥಾನಕ್ಕೆ ಚುನಾವಣೆಯನ್ನು ಕಾನೂನು ಮಾನ್ಯವಲ್ಲವೆಂದು ಘೋಷಿಸಲಾಗಿರುವುದರಿಂದಾಗಿ **ಪರಿಶಿಷ್ಟ ಜಾತಿ(ಮ)** ಸ್ಥಾನವು ಖಾಲಿಯಾಗಿರುವುದಾಗಿ ಘೋಷಿಸಿರುವುದರಿಂದಾಗಿ ಉಂಟಾದ ಖಾಲಿ ಸ್ಥಾನವನ್ನು ತುಂಬಲು ಚುನಾವಣೆಯನ್ನು ನಡೆಸಬೇಕಾಗಿರುವುದರಿಂದ.
4. ರಾಜ್ಯ ಚುನಾವಣಾ ಆಯೋಗ, ಕರ್ನಾಟಕ, ಬೆಂಗಳೂರು ರವರ ಆದೇಶ ಸಂಖ್ಯೆ: ರಾಚುಆ/39/ಇಜಿಪಿ(2)2013, ದಿನಾಂಕ: 10–02–2014 ರಂತೆ ನೀಡಿರುವ ಚುನಾವಣಾ ವೇಳಾ ಪಟ್ಟಿಯಂತೆ, ಕರ್ನಾಟಕ ಪಂಚಾಯತ್ ರಾಜ್ (ಚುನಾವಣೆಗಳನ್ನು ನಡೆಸುವ) ನಿಯಮಗಳು 1993ರ 12ನೇ ನಿಯಮಕ್ಕನುಸಾರವಾಗಿ ರಾಮನಗರ ಜಿಲ್ಲೆಯ ಜಿಲ್ಲಾಧಿಕಾರಿ ಆದ **ಡಾ॥ ಡಿ.ಎಸ್.ವಿಶ್ವನಾಥ್ ಭಾ.ಆ.ಸೇ** ಎಂಬ ಹೆಸರಿನ ನಾನು ಸದರಿ ಚುನಾವಣೆಗೆ ಸಂಬಂಧಿಸಿದಂತೆ, ಈ ಕೆಳಕಂಡ ಕಾರ್ಯಕ್ರಮ ವೇಳಾಪಟ್ಟಿಯನ್ನು ಈ ಮೂಲಕ ನಿಗಧಿಪಡಿಸಿ ಅಧಿಸೂಚನೆ ಹೊರಡಿಸಿರುತ್ತೇನೆ.

**ಚುನಾವಣಾ ವೇಳಾ ಪಟ್ಟಿ**

| | | |
|---|---|---|
| 1 | ಚುನಾವಣಾ ಅಧಿಸೂಚನೆಯ ದಿನಾಂಕ ಮತ್ತು ದಿನ | 12–02–2014 (ಬುಧವಾರ) |
| 2 | ನಾಮಪತ್ರಗಳನ್ನು ಸಲ್ಲಿಸಲು ಕೊನೆಯ ದಿನಾಂಕ ಮತ್ತು ದಿನ | 19–02–2014 (ಬುಧವಾರ) |
| 3 | ನಾಮಪತ್ರಗಳನ್ನು ಪರಿಶೀಲಿಸುವ ದಿನಾಂಕ ಮತ್ತು ದಿನ | 20–02–2014 (ಗುರುವಾರ) |
| 4 | ಉಮೇದುವಾರಿಕೆಗಳನ್ನು ಹಿಂತೆಗೆದುಕೊಳ್ಳುವ ಕೊನೆಯ ದಿನಾಂಕ ಮತ್ತು ದಿನ | 22–02–2014 (ಶನಿವಾರ) |
| 5 | ಮತದಾನ ಅವಶ್ಯವಿದ್ದರೆ, ಮತದಾನವನ್ನು ನಡೆಸಬೇಕಾದ ದಿನಾಂಕ ಮತ್ತು ದಿನ (ಬೆಳಿಗ್ಗೆ 7–00 ರಿಂದ ಸಂಜೆ 5–00 ಗಂಟೆಯವರೆಗೆ) | 02–03–2014 (ಭಾನುವಾರ) |
| 6 | ಮರು ಮತದಾನ ಅವಶ್ಯವಿದ್ದರೆ, ಮರು ಮತದಾನ ನಡೆಸಬೇಕಾದ ದಿನಾಂಕ ಮತ್ತು ದಿನ | 04–03–2014 (ಮಂಗಳವಾರ) |
| 7 | ಮತಗಳ ಎಣಿಕೆ ದಿನಾಂಕ ದಂದು ಬೆಳಿಗ್ಗೆ 8–00 ಗಂಟೆಯಿಂದ (ತಾಲ್ಲೂಕಿನ ಕೇಂದ್ರ ಸ್ಥಳದಲ್ಲಿ) | 05–03–2014 (ಬುಧವಾರ) |
| 8 | ಚುನಾವಣೆಯನ್ನು ಯಾವ ದಿನಾಂಕಕ್ಕೆ ಮುಂಚೆ ಮುಕ್ತಾಯಗೊಳಿಸಬೇಕೋ ಆ ದಿನಾಂಕ ಮತ್ತು ದಿನ | 05–03–2014 (ಬುಧವಾರ) |

**ಡಾ॥ ಡಿ.ಎಸ್. ವಿಶ್ವನಾಥ್, ಭಾ.ಆ.ಸೇ**
ಜಿಲ್ಲಾಧಿಕಾರಿ
ರಾಮನಗರ ಜಿಲ್ಲೆ, ರಾಮನಗರ

# ವಿಶೇಷ ರಾಜ್ಯ ಪತ್ರಿಕೆ

| ಭಾಗ – III | ಬೆಂಗಳೂರು, ಬುಧವಾರ, ಫೆಬ್ರವರಿ ೧೨, ೨೦೧೪ (ಮಾಘ ೨೩, ಶಕ ವರ್ಷ ೧೯೩೫) | ನಂ. ೧೦೫ |
|---|---|---|
| Part – III | Bangalore, Wednesday, February 12, 2014 (Magha 23, Shaka Varsha 1935) | No. 105 |

## ಜಿಲ್ಲಾಧಿಕಾರಿಗಳ ಕಛೇರಿ, ರಾಮನಗರ ಜಿಲ್ಲೆ, ರಾಮನಗರ

**ಪ್ರಪತ್ರ–2**

**(12(2)ನೇ ನಿಯಮವನ್ನು ನೋಡಿ)**

**(ಗ್ರಾಮ ಪಂಚಾಯಿತಿಗಳಿಗೆ ಚುನಾವಣೆಗಳ ಸಂದರ್ಭದಲ್ಲಿ ಉಪಯೋಗಕ್ಕಾಗಿ)**

**ಅಧಿಸೂಚನೆ**

**ಸಂಖ್ಯೆ: ಚುನಾವಣಾ(ಪಂ)ಸಿಆರ್ 62/2013–14, ದಿನಾಂಕ: 12–02–2014**

1. 1993ರ ಕರ್ನಾಟಕ ಪಂಚಾಯತ್ ರಾಜ್ ಅಧಿನಿಯಮದ ಉಪಬಂಧಗಳ ಮೇರೆಗೆ ರಾಮನಗರ ಜಿಲ್ಲೆಯ ತಾಲ್ಲೂಕುಗಳಿಗೆ ಸಂಬಂಧಿಸಿದಂತೆ ಗ್ರಾಮ ಪಂಚಾಯಿತಿಯಲ್ಲಿ ಆಕಸ್ಮಿಕವಾಗಿ ತೆರವಾಗಿರುವ/ಸದಸ್ಯರ ಖಾಲಿ ಉಳಿದಿರುವ ಸ್ಥಾನಗಳಿಗೆ ಅನುಬಂಧದಲ್ಲಿನ ಗ್ರಾಮ ಪಂಚಾಯಿತಿಗೆ ಚುನಾಯಿತ ಸದಸ್ಯರ ಸ್ಥಾನಗಳನ್ನು ತುಂಬಲು.
2. **ಮಾಗಡಿ ತಾಲ್ಲೂಕು, ಆಗಲಕೋಟೆ** ಗ್ರಾಮ ಪಂಚಾಯಿತಿಯ **90–ಹೇಳಿಗೇಹಳ್ಳಿ ಕ್ಷೇತ್ರದಲ್ಲಿ** ಆಕಸ್ಮಿಕವಾಗಿ ತೆರವಾಗಿರುವ/ಸದಸ್ಯರ ಖಾಲಿ ಉಳಿದಿರುವ ಸ್ಥಾನಗಳಿಗೆ ಸದಸ್ಯರು ತೆರವಾದ ಸ್ಥಾನಗಳನ್ನು ತುಂಬಲು.
3. ಶ್ರೀ. ಶಂಕರ್ ಇವರ ರಾಜಿನಾಮೆಯಿಂದಾಗಿ ತೆರವಾಗಿರುವ ಸ್ಥಾನಕ್ಕೆ ಚುನಾವಣೆಯನ್ನು ಕಾನೂನು ಮಾನ್ಯವಲ್ಲವೆಂದು ಘೋಷಿಸಲಾಗಿರುವುದರಿಂದಾಗಿ **ಪರಿಶಿಷ್ಟ ಜಾತಿ** ಸ್ಥಾನವು ಖಾಲಿಯಾಗಿರುವುದಾಗಿ ಘೋಷಿಸಿರುವುದರಿಂದಾಗಿ ಉಂಟಾದ ಖಾಲಿ ಸ್ಥಾನವನ್ನು ತುಂಬಲು ಚುನಾವಣೆಯನ್ನು ನಡೆಸಬೇಕಾಗಿರುವುದರಿಂದ.
4. ರಾಜ್ಯ ಚುನಾವಣಾ ಆಯೋಗ, ಕರ್ನಾಟಕ, ಬೆಂಗಳೂರು ರವರ ಆದೇಶ ಸಂಖ್ಯೆ: ರಾಚುಅ/39/ಇಜಿಪಿ(2)2013, ದಿನಾಂಕ: 10–02–2014 ರಂತೆ ನೀಡಿರುವ ಚುನಾವಣಾ ವೇಳಾ ಪಟ್ಟಿಯಂತೆ, ಕರ್ನಾಟಕ ಪಂಚಾಯತ್ ರಾಜ್ (ಚುನಾವಣೆಗಳನ್ನು ನಡೆಸುವ) ನಿಯಮಗಳು 1993ರ 12ನೇ ನಿಯಮಕ್ಕನುಸಾರವಾಗಿ ರಾಮನಗರ ಜಿಲ್ಲೆಯ ಜಿಲ್ಲಾಧಿಕಾರಿ ಆದ **ಡಾ|| ಡಿ.ಎಸ್.ವಿಶ್ವನಾಥ್ ಭಾ.ಆ.ಸೇ** ಎಂಬ ಹೆಸರಿನ ನಾನು ಸದರಿ ಚುನಾವಣೆಗೆ ಸಂಬಂಧಿಸಿದಂತೆ, ಈ ಕೆಳಕಂಡ ಕಾರ್ಯಕ್ರಮ ವೇಳಾಪಟ್ಟಿಯನ್ನು ಈ ಮೂಲಕ ನಿಗಧಿಪಡಿಸಿ ಅಧಿಸೂಚನೆ ಹೊರಡಿಸಿರುತ್ತೇನೆ.

**ಚುನಾವಣಾ ವೇಳಾ ಪಟ್ಟಿ**

| | | |
|---|---|---|
| 1 | ಚುನಾವಣಾ ಅಧಿಸೂಚನೆಯ ದಿನಾಂಕ ಮತ್ತು ದಿನ | 12–02–2014 (ಬುಧವಾರ) |
| 2 | ನಾಮಪತ್ರಗಳನ್ನು ಸಲ್ಲಿಸಲು ಕೊನೆಯ ದಿನಾಂಕ ಮತ್ತು ದಿನ | 19–02–2014 (ಬುಧವಾರ) |
| 3 | ನಾಮಪತ್ರಗಳನ್ನು ಪರಿಶೀಲಿಸುವ ದಿನಾಂಕ ಮತ್ತು ದಿನ | 20–02–2014 (ಗುರುವಾರ) |
| 4 | ಉಮೇದುವಾರಿಕೆಗಳನ್ನು ಹಿಂತೆಗೆದುಕೊಳ್ಳುವ ಕೊನೆಯ ದಿನಾಂಕ ಮತ್ತು ದಿನ | 22–02–2014 (ಶನಿವಾರ) |
| 5 | ಮತದಾನ ಅವಶ್ಯವಿದ್ದರೆ, ಮತದಾನವನ್ನು ನಡೆಸಬೇಕಾದ ದಿನಾಂಕ ಮತ್ತು ದಿನ (ಬೆಳಿಗ್ಗೆ 7–00 ರಿಂದ ಸಂಜೆ 5–00 ಗಂಟೆಯವರೆಗೆ) | 02–03–2014 (ಭಾನುವಾರ) |
| 6 | ಮರು ಮತದಾನ ಅವಶ್ಯವಿದ್ದರೆ, ಮರು ಮತದಾನ ನಡೆಸಬೇಕಾದ ದಿನಾಂಕ ಮತ್ತು ದಿನ | 04–03–2014 (ಮಂಗಳವಾರ) |
| 7 | ಮತಗಳ ಎಣಿಕೆ ದಿನಾಂಕ ದಂದು ಬೆಳಿಗ್ಗೆ 8–00 ಗಂಟೆಯಿಂದ (ತಾಲ್ಲೂಕಿನ ಕೇಂದ್ರ ಸ್ಥಳದಲ್ಲಿ) | 05–03–2014 (ಬುಧವಾರ) |
| 8 | ಚುನಾವಣೆಯನ್ನು ಯಾವ ದಿನಾಂಕಕ್ಕೆ ಮುಂಚೆ ಮುಕ್ತಾಯಗೊಳಿಸಬೇಕೋ ಆ ದಿನಾಂಕ ಮತ್ತು ದಿನ | 05–03–2014 (ಬುಧವಾರ) |

**ಡಾ|| ಡಿ.ಎಸ್. ವಿಶ್ವನಾಥ್, ಭಾ.ಆ.ಸೇ**
ಜಿಲ್ಲಾಧಿಕಾರಿ
ರಾಮನಗರ ಜಿಲ್ಲೆ, ರಾಮನಗರ

ವಿಶೇಷ ರಾಜ್ಯ ಪತ್ರಿಕೆ

| | | |
|---|---|---|
| ಭಾಗ – III | ಬೆಂಗಳೂರು, ಬುಧವಾರ, ಫೆಬ್ರವರಿ ೧೨, ೨೦೧೪ (ಮಾಘ ೨೩, ಶಕ ವರ್ಷ ೧೯೩೫) | ನಂ. ೧೦೬ |
| Part – III | Bangalore, Wednesday, February 12, 2014 (Magha 23, Shaka Varsha 1935) | No. 106 |

## ಜಿಲ್ಲಾಧಿಕಾರಿಗಳ ಕಛೇರಿ, ರಾಮನಗರ ಜಿಲ್ಲೆ, ರಾಮನಗರ

**ಪ್ರಪತ್ರ–2**

**(12(2)ನೇ ನಿಯಮವನ್ನು ನೋಡಿ)**

**(ಗ್ರಾಮ ಪಂಚಾಯಿತಿಗಳಿಗೆ ಚುನಾವಣೆಗಳ ಸಂದರ್ಭದಲ್ಲಿ ಉಪಯೋಗಕ್ಕಾಗಿ)**

**ಅಧಿಸೂಚನೆ**

**ಸಂಖ್ಯೆ: ಚುನಾವಣಾ(ಪಂ)ಸಿಆರ್ 62/2013–14, ದಿನಾಂಕ: 12–02–2014**

1. 1993ರ ಕರ್ನಾಟಕ ಪಂಚಾಯತ್ ರಾಜ್ ಅಧಿನಿಯಮದ ಉಪಬಂಧಗಳ ಮೇರೆಗೆ ರಾಮನಗರ ಜಿಲ್ಲೆಯ ತಾಲ್ಲೂಕುಗಳಿಗೆ ಸಂಬಂಧಿಸಿದಂತೆ ಗ್ರಾಮ ಪಂಚಾಯಿತಿಯಲ್ಲಿ ಆಕಸ್ಮಿಕವಾಗಿ ತೆರವಾಗಿರುವ/ಸದಸ್ಯರ ಖಾಲಿ ಉಳಿದಿರುವ ಸ್ಥಾನಗಳಿಗೆ ಅನುಬಂಧದಲ್ಲಿನ ಗ್ರಾಮ ಪಂಚಾಯಿತಿಗೆ ಚುನಾಯಿತ ಸದಸ್ಯರ ಸ್ಥಾನಗಳನ್ನು ತುಂಬಲು.

2. **ಮಾಗಡಿ ತಾಲ್ಲೂಕು, ಹಂಚೀಕುಪ್ಪೆ** ಗ್ರಾಮ ಪಂಚಾಯಿತಿಯ **61–ಕರಲಮಂಗಲ ಕ್ಷೇತ್ರದಲ್ಲಿ** ಆಕಸ್ಮಿಕವಾಗಿ ತೆರವಾಗಿರುವ/ಸದಸ್ಯರ ಖಾಲಿ ಉಳಿದಿರುವ ಸ್ಥಾನಗಳಿಗೆ ಸದಸ್ಯರು ತೆರವಾದ ಸ್ಥಾನಗಳನ್ನು ತುಂಬಲು.

3. ಶ್ರೀ. ರಾಜಣ್ಣ ಇವರ ಮರಣದಿಂದಾಗಿ ತೆರವಾಗಿರುವ ಸ್ಥಾನಕ್ಕೆ ಚುನಾವಣೆಯನ್ನು ಕಾನೂನು ಮಾನ್ಯವಲ್ಲವೆಂದು ಘೋಷಿಸಲಾಗಿರುವುದರಿಂದಾಗಿ **ಬಿ.ಸಿ.ಎಂ (ಎ)** ಸ್ಥಾನವು ಖಾಲಿಯಾಗಿರುವುದಾಗಿ ಘೋಷಿಸಿರುವುದರಿಂದಾಗಿ ಉಂಟಾದ ಖಾಲಿ ಸ್ಥಾನವನ್ನು ತುಂಬಲು ಚುನಾವಣೆಯನ್ನು ನಡೆಸಬೇಕಾಗಿರುವುದರಿಂದ.

4. ರಾಜ್ಯ ಚುನಾವಣಾ ಆಯೋಗ, ಕರ್ನಾಟಕ, ಬೆಂಗಳೂರು ರವರ ಆದೇಶ ಸಂಖ್ಯೆ: ರಾಚುಅ/39/ಇಜಿಪಿ(2)2013, ದಿನಾಂಕ: 10–02–2014 ರಂತೆ ನೀಡಿರುವ ಚುನಾವಣಾ ವೇಳಾ ಪಟ್ಟಿಯಂತೆ, ಕರ್ನಾಟಕ ಪಂಚಾಯತ್ ರಾಜ್ (ಚುನಾವಣೆಗಳನ್ನು ನಡೆಸುವ) ನಿಯಮಗಳು 1993ರ 12ನೇ ನಿಯಮಕ್ಕನುಸಾರವಾಗಿ ರಾಮನಗರ ಜಿಲ್ಲೆಯ ಜಿಲ್ಲಾಧಿಕಾರಿ ಆದ **ಡಾ|| ಡಿ.ಎಸ್.ವಿಶ್ವನಾಥ್ ಭಾ.ಆ.ಸೇ** ಎಂಬ ಹೆಸರಿನ ನಾನು ಸದರಿ ಚುನಾವಣೆಗೆ ಸಂಬಂಧಿಸಿದಂತೆ, ಈ ಕೆಳಕಂಡ ಕಾರ್ಯಕ್ರಮ ವೇಳಾಪಟ್ಟಿಯನ್ನು ಈ ಮೂಲಕ ನಿಗಧಿಪಡಿಸಿ ಅಧಿಸೂಚನೆ ಹೊರಡಿಸಿರುತ್ತೇನೆ.

**ಚುನಾವಣಾ ವೇಳಾ ಪಟ್ಟಿ**

| | | |
|---|---|---|
| 1 | ಚುನಾವಣಾ ಅಧಿಸೂಚನೆಯ ದಿನಾಂಕ ಮತ್ತು ದಿನ | 12–02–2014 (ಬುಧವಾರ) |
| 2 | ನಾಮಪತ್ರಗಳನ್ನು ಸಲ್ಲಿಸಲು ಕೊನೆಯ ದಿನಾಂಕ ಮತ್ತು ದಿನ | 19–02–2014 (ಬುಧವಾರ) |
| 3 | ನಾಮಪತ್ರಗಳನ್ನು ಪರಿಶೀಲಿಸುವ ದಿನಾಂಕ ಮತ್ತು ದಿನ | 20–02–2014 (ಗುರುವಾರ) |
| 4 | ಉಮೇದುವಾರಿಕೆಗಳನ್ನು ಹಿಂತೆಗೆದುಕೊಳ್ಳುವ ಕೊನೆಯ ದಿನಾಂಕ ಮತ್ತು ದಿನ | 22–02–2014 (ಶನಿವಾರ) |
| 5 | ಮತದಾನ ಅವಶ್ಯವಿದ್ದರೆ, ಮತದಾನವನ್ನು ನಡೆಸಬೇಕಾದ ದಿನಾಂಕ ಮತ್ತು ದಿನ (ಬೆಳಿಗ್ಗೆ 7–00 ರಿಂದ ಸಂಜೆ 5–00 ಗಂಟೆಯವರೆಗೆ) | 02–03–2014 (ಭಾನುವಾರ) |
| 6 | ಮರು ಮತದಾನ ಅವಶ್ಯವಿದ್ದರೆ, ಮರು ಮತದಾನ ನಡೆಸಬೇಕಾದ ದಿನಾಂಕ ಮತ್ತು ದಿನ | 04–03–2014 (ಮಂಗಳವಾರ) |
| 7 | ಮತಗಳ ಎಣಿಕೆ ದಿನಾಂಕ ದಂದು ಬೆಳಿಗ್ಗೆ 8–00 ಗಂಟೆಯಿಂದ (ತಾಲ್ಲೂಕಿನ ಕೇಂದ್ರ ಸ್ಥಳದಲ್ಲಿ) | 05–03–2014 (ಬುಧವಾರ) |
| 8 | ಚುನಾವಣೆಯನ್ನು ಯಾವ ದಿನಾಂಕಕ್ಕೆ ಮುಂಚೆ ಮುಕ್ತಾಯಗೊಳಿಸಬೇಕೋ ಆ ದಿನಾಂಕ ಮತ್ತು ದಿನ | 05–03–2014 (ಬುಧವಾರ) |

**ಡಾ|| ಡಿ.ಎಸ್. ವಿಶ್ವನಾಥ್, ಭಾ.ಆ.ಸೇ**
ಜಿಲ್ಲಾಧಿಕಾರಿ
ರಾಮನಗರ ಜಿಲ್ಲೆ, ರಾಮನಗರ

# ವಿಶೇಷ ರಾಜ್ಯ ಪತ್ರಿಕೆ

| ಭಾಗ – III | ಬೆಂಗಳೂರು, ಬುಧವಾರ, ಫೆಬ್ರವರಿ ೧೨, ೨೦೧೪ (ಮಾಘ ೨೩, ಶಕ ವರ್ಷ ೧೯೩೫) | ನಂ. ೧೦೭ |
|---|---|---|
| Part – III | Bangalore, Wednesday, February 12, 2014 (Magha 23, Shaka Varsha 1935) | No. 107 |


## ಜಿಲ್ಲಾಧಿಕಾರಿಗಳ ಕಛೇರಿ, ರಾಮನಗರ ಜಿಲ್ಲೆ, ರಾಮನಗರ

**ಪ್ರಪತ್ರ–2**

**(12(2)ನೇ ನಿಯಮವನ್ನು ನೋಡಿ)**

**(ಗ್ರಾಮ ಪಂಚಾಯಿತಿಗಳಿಗೆ ಚುನಾವಣೆಗಳ ಸಂದರ್ಭದಲ್ಲಿ ಉಪಯೋಗಕ್ಕಾಗಿ)**

**ಅಧಿಸೂಚನೆ**

**ಸಂಖ್ಯೆ: ಚುನಾವಣಾ(ಪಂ)ಸಿಆರ್ 62/2013–14, ದಿನಾಂಕ: 12–02–2014**

1. 1993ರ ಕರ್ನಾಟಕ ಪಂಚಾಯತ್ ರಾಜ್ ಅಧಿನಿಯಮದ ಉಪಬಂಧಗಳ ಮೇರೆಗೆ ರಾಮನಗರ ಜಿಲ್ಲೆಯ ತಾಲ್ಲೂಕುಗಳಿಗೆ ಸಂಬಂಧಿಸಿದಂತೆ ಗ್ರಾಮ ಪಂಚಾಯಿತಿಯಲ್ಲಿ ಆಕಸ್ಮಿಕವಾಗಿ ತೆರವಾಗಿರುವ/ಸದಸ್ಯರ ಖಾಲಿ ಉಳಿದಿರುವ ಸ್ಥಾನಗಳಿಗೆ ಅನುಬಂಧದಲ್ಲಿನ ಗ್ರಾಮ ಪಂಚಾಯಿತಿಗೆ ಚುನಾಯಿತ ಸದಸ್ಯರ ಸ್ಥಾನಗಳನ್ನು ತುಂಬಲು.
2. **ಮಾಗಡಿ ತಾಲ್ಲೂಕು, ಕಲ್ಯಾ** ಗ್ರಾಮ ಪಂಚಾಯಿತಿಯ **33–ಉಪ್ಪಾರ್ತಿ ಕ್ಷೇತ್ರದಲ್ಲಿ** ಆಕಸ್ಮಿಕವಾಗಿ ತೆರವಾಗಿರುವ/ಸದಸ್ಯರ ಖಾಲಿ ಉಳಿದಿರುವ ಸ್ಥಾನಗಳಿಗೆ ಸದಸ್ಯರು ತೆರವಾದ ಸ್ಥಾನಗಳನ್ನು ತುಂಬಲು.
3. ಶ್ರೀಮತಿ. ಲಕ್ಷ್ಮಮ್ಮ ಇವರ ಮರಣದಿಂದಾಗಿ ತೆರವಾಗಿರುವ ಸ್ಥಾನಕ್ಕೆ ಚುನಾವಣೆಯನ್ನು ಕಾನೂನು ಮಾನ್ಯವಲ್ಲವೆಂದು ಘೋಷಿಸಲಾಗಿರುವುದರಿಂದಾಗಿ **ಪರಿಶಿಷ್ಟ ಜಾತಿ(ಮ)** ಸ್ಥಾನವು ಖಾಲಿಯಾಗಿರುವುದಾಗಿ ಘೋಷಿಸಿರುವುದರಿಂದಾಗಿ ಉಂಟಾದ ಖಾಲಿ ಸ್ಥಾನವನ್ನು ತುಂಬಲು ಚುನಾವಣೆಯನ್ನು ನಡೆಸಬೇಕಾಗಿರುವುದರಿಂದ.
4. ರಾಜ್ಯ ಚುನಾವಣಾ ಆಯೋಗ, ಕರ್ನಾಟಕ, ಬೆಂಗಳೂರು ರವರ ಆದೇಶ ಸಂಖ್ಯೆ: ರಾಚುಅ/39/ಇಜಿಪಿ(2)2013, ದಿನಾಂಕ: 10–02–2014 ರಂತೆ ನೀಡಿರುವ ಚುನಾವಣಾ ವೇಳಾ ಪಟ್ಟಿಯಂತೆ, ಕರ್ನಾಟಕ ಪಂಚಾಯತ್ ರಾಜ್ (ಚುನಾವಣೆಗಳನ್ನು ನಡೆಸುವ) ನಿಯಮಗಳು 1993ರ 12ನೇ ನಿಯಮಕ್ಕನುಸಾರವಾಗಿ ರಾಮನಗರ ಜಿಲ್ಲೆಯ ಜಿಲ್ಲಾಧಿಕಾರಿ ಆದ **ಡಾ|| ಡಿ.ಎಸ್.ವಿಶ್ವನಾಥ್ ಭಾ.ಆ.ಸೇ** ಎಂಬ ಹೆಸರಿನ ನಾನು ಸದರಿ ಚುನಾವಣೆಗೆ ಸಂಬಂಧಿಸಿದಂತೆ, ಈ ಕೆಳಕಂಡ ಕಾರ್ಯಕ್ರಮ ವೇಳಾಪಟ್ಟಿಯನ್ನು ಈ ಮೂಲಕ ನಿಗಧಿಪಡಿಸಿ ಅಧಿಸೂಚನೆ ಹೊರಡಿಸಿರುತ್ತೇನೆ.

**ಚುನಾವಣಾ ವೇಳಾ ಪಟ್ಟಿ**

| | | |
|---|---|---|
| 1 | ಚುನಾವಣಾ ಅಧಿಸೂಚನೆಯ ದಿನಾಂಕ ಮತ್ತು ದಿನ | 12–02–2014 (ಬುಧವಾರ) |
| 2 | ನಾಮಪತ್ರಗಳನ್ನು ಸಲ್ಲಿಸಲು ಕೊನೆಯ ದಿನಾಂಕ ಮತ್ತು ದಿನ | 19–02–2014 (ಬುಧವಾರ) |
| 3 | ನಾಮಪತ್ರಗಳನ್ನು ಪರಿಶೀಲಿಸುವ ದಿನಾಂಕ ಮತ್ತು ದಿನ | 20–02–2014 (ಗುರುವಾರ) |
| 4 | ಉಮೇದುವಾರಿಕೆಗಳನ್ನು ಹಿಂತೆಗೆದುಕೊಳ್ಳುವ ಕೊನೆಯ ದಿನಾಂಕ ಮತ್ತು ದಿನ | 22–02–2014 (ಶನಿವಾರ) |
| 5 | ಮತದಾನ ಅವಶ್ಯವಿದ್ದರೆ, ಮತದಾನವನ್ನು ನಡೆಸಬೇಕಾದ ದಿನಾಂಕ ಮತ್ತು ದಿನ (ಬೆಳಿಗ್ಗೆ 7–00 ರಿಂದ ಸಂಜೆ 5–00 ಗಂಟೆಯವರೆಗೆ) | 02–03–2014 (ಭಾನುವಾರ) |
| 6 | ಮರು ಮತದಾನ ಅವಶ್ಯವಿದ್ದರೆ, ಮರು ಮತದಾನ ನಡೆಸಬೇಕಾದ ದಿನಾಂಕ ಮತ್ತು ದಿನ | 04–03–2014 (ಮಂಗಳವಾರ) |
| 7 | ಮತಗಳ ಎಣಿಕೆ ದಿನಾಂಕ ದಂದು ಬೆಳಿಗ್ಗೆ 8–00 ಗಂಟೆಯಿಂದ (ತಾಲ್ಲೂಕಿನ ಕೇಂದ್ರ ಸ್ಥಳದಲ್ಲಿ) | 05–03–2014 (ಬುಧವಾರ) |
| 8 | ಚುನಾವಣೆಯನ್ನು ಯಾವ ದಿನಾಂಕಕ್ಕೆ ಮುಂಚೆ ಮುಕ್ತಾಯಗೊಳಿಸಬೇಕೋ ಆ ದಿನಾಂಕ ಮತ್ತು ದಿನ | 05–03–2014 (ಬುಧವಾರ) |

**ಡಾ|| ಡಿ.ಎಸ್. ವಿಶ್ವನಾಥ್, ಭಾ.ಆ.ಸೇ**
ಜಿಲ್ಲಾಧಿಕಾರಿ
ರಾಮನಗರ ಜಿಲ್ಲೆ, ರಾಮನಗರ

ವಿಶೇಷ ರಾಜ್ಯ ಪತ್ರಿಕೆ

| ಭಾಗ – III | ಬೆಂಗಳೂರು, ಬುಧವಾರ, ಫೆಬ್ರವರಿ ೧೨, ೨೦೧೪ (ಮಾಘ ೨೩, ಶಕ ವರ್ಷ ೧೯೩೫) | ನಂ. ೧೦೮ |
|---|---|---|
| Part – III | Bangalore, Wednesday, February 12, 2014 (Magha 23, Shaka Varsha 1935) | No. 108 |

## ಜಿಲ್ಲಾಧಿಕಾರಿಗಳ ಕಛೇರಿ, ರಾಮನಗರ ಜಿಲ್ಲೆ, ರಾಮನಗರ

**ಪ್ರಪತ್ರ–2**

**(12(2)ನೇ ನಿಯಮವನ್ನು ನೋಡಿ)**

**(ಗ್ರಾಮ ಪಂಚಾಯಿತಿಗಳಿಗೆ ಚುನಾವಣೆಗಳ ಸಂದರ್ಭದಲ್ಲಿ ಉಪಯೋಗಕ್ಕಾಗಿ)**

**ಅಧಿಸೂಚನೆ**

**ಸಂಖ್ಯೆ: ಚುನಾವಣಾ(ಪಂ)ಸಿಆರ್ 62/2013–14, ದಿನಾಂಕ: 12–02–2014**

1. 1993ರ ಕರ್ನಾಟಕ ಪಂಚಾಯತ್ ರಾಜ್ ಅಧಿನಿಯಮದ ಉಪಬಂಧಗಳ ಮೇರೆಗೆ ರಾಮನಗರ ಜಿಲ್ಲೆಯ ತಾಲ್ಲೂಕುಗಳಿಗೆ ಸಂಬಂಧಿಸಿದಂತೆ ಗ್ರಾಮ ಪಂಚಾಯಿತಿಯಲ್ಲಿ ಆಕಸ್ಮಿಕವಾಗಿ ತೆರವಾಗಿರುವ/ಸದಸ್ಯರ ಖಾಲಿ ಉಳಿದಿರುವ ಸ್ಥಾನಗಳಿಗೆ ಅನುಬಂಧದಲ್ಲಿನ ಗ್ರಾಮ ಪಂಚಾಯಿತಿಗೆ ಚುನಾಯಿತ ಸದಸ್ಯರ ಸ್ಥಾನಗಳನ್ನು ತುಂಬಲು.
2. **ಮಾಗಡಿ ತಾಲ್ಲೂಕು, ಸೀಗೇಕುಪ್ಪೆ** ಗ್ರಾಮ ಪಂಚಾಯಿತಿಯ **81–ಚಕ್ರಬಾವಿ ಕ್ಷೇತ್ರದಲ್ಲಿ** ಆಕಸ್ಮಿಕವಾಗಿ ತೆರವಾಗಿರುವ/ಸದಸ್ಯರ ಖಾಲಿ ಉಳಿದಿರುವ ಸ್ಥಾನಗಳಿಗೆ ಸದಸ್ಯರು ತೆರವಾದ ಸ್ಥಾನಗಳನ್ನು ತುಂಬಲು.
3. ಶ್ರೀ. ಸಿ.ಬಿ.ಗಂಗಾಧರಯ್ಯ ಇವರ ಮರಣದಿಂದಾಗಿ ತೆರವಾಗಿರುವ ಸ್ಥಾನಕ್ಕೆ ಚುನಾವಣೆಯನ್ನು ಕಾನೂನು ಮಾನ್ಯವಲ್ಲವೆಂದು ಘೋಷಿಸಲಾಗಿರುವುದರಿಂದಾಗಿ **ಸಾಮಾನ್ಯ** ಸ್ಥಾನವು ಖಾಲಿಯಾಗಿರುವುದಾಗಿ ಘೋಷಿಸಿರುವುದರಿಂದಾಗಿ ಉಂಟಾದ ಖಾಲಿ ಸ್ಥಾನವನ್ನು ತುಂಬಲು ಚುನಾವಣೆಯನ್ನು ನಡೆಸಬೇಕಾಗಿರುವುದರಿಂದ.
4. ರಾಜ್ಯ ಚುನಾವಣಾ ಆಯೋಗ, ಕರ್ನಾಟಕ, ಬೆಂಗಳೂರು ರವರ ಆದೇಶ ಸಂಖ್ಯೆ: ರಾಚುಆ/39/ಇಜಿಪಿ(2)2013, ದಿನಾಂಕ: 10–02–2014 ರಂತೆ ನೀಡಿರುವ ಚುನಾವಣಾ ವೇಳಾ ಪಟ್ಟಿಯಂತೆ, ಕರ್ನಾಟಕ ಪಂಚಾಯತ್ ರಾಜ್ (ಚುನಾವಣೆಗಳನ್ನು ನಡೆಸುವ) ನಿಯಮಗಳು 1993ರ 12ನೇ ನಿಯಮಕ್ಕನುಸಾರವಾಗಿ ರಾಮನಗರ ಜಿಲ್ಲೆಯ ಜಿಲ್ಲಾಧಿಕಾರಿ ಆದ **ಡಾ॥ ಡಿ.ಎಸ್.ವಿಶ್ವನಾಥ್ ಭಾ.ಆ.ಸೇ** ಎಂಬ ಹೆಸರಿನ ನಾನು ಸದರಿ ಚುನಾವಣೆಗೆ ಸಂಬಂಧಿಸಿದಂತೆ, ಈ ಕೆಳಕಂಡ ಕಾರ್ಯಕ್ರಮ ವೇಳಾಪಟ್ಟಿಯನ್ನು ಈ ಮೂಲಕ ನಿಗಧಿಪಡಿಸಿ ಅಧಿಸೂಚನೆ ಹೊರಡಿಸಿರುತ್ತೇನೆ.

**ಚುನಾವಣಾ ವೇಳಾ ಪಟ್ಟಿ**

| | | |
|---|---|---|
| 1 | ಚುನಾವಣಾ ಅಧಿಸೂಚನೆಯ ದಿನಾಂಕ ಮತ್ತು ದಿನ | 12–02–2014 (ಬುಧವಾರ) |
| 2 | ನಾಮಪತ್ರಗಳನ್ನು ಸಲ್ಲಿಸಲು ಕೊನೆಯ ದಿನಾಂಕ ಮತ್ತು ದಿನ | 19–02–2014 (ಬುಧವಾರ) |
| 3 | ನಾಮಪತ್ರಗಳನ್ನು ಪರಿಶೀಲಿಸುವ ದಿನಾಂಕ ಮತ್ತು ದಿನ | 20–02–2014 (ಗುರುವಾರ) |
| 4 | ಉಮೇದುವಾರಿಕೆಗಳನ್ನು ಹಿಂತೆಗೆದುಕೊಳ್ಳುವ ಕೊನೆಯ ದಿನಾಂಕ ಮತ್ತು ದಿನ | 22–02–2014 (ಶನಿವಾರ) |
| 5 | ಮತದಾನ ಅವಶ್ಯವಿದ್ದರೆ, ಮತದಾನವನ್ನು ನಡೆಸಬೇಕಾದ ದಿನಾಂಕ ಮತ್ತು ದಿನ (ಬೆಳಿಗ್ಗೆ 7–00 ರಿಂದ ಸಂಜೆ 5–00 ಗಂಟೆಯವರೆಗೆ) | 02–03–2014 (ಭಾನುವಾರ) |
| 6 | ಮರು ಮತದಾನ ಅವಶ್ಯವಿದ್ದರೆ, ಮರು ಮತದಾನ ನಡೆಸಬೇಕಾದ ದಿನಾಂಕ ಮತ್ತು ದಿನ | 04–03–2014 (ಮಂಗಳವಾರ) |
| 7 | ಮತಗಳ ಎಣಿಕೆ ದಿನಾಂಕ ದಂದು ಬೆಳಿಗ್ಗೆ 8–00 ಗಂಟೆಯಿಂದ (ತಾಲ್ಲೂಕಿನ ಕೇಂದ್ರ ಸ್ಥಳದಲ್ಲಿ) | 05–03–2014 (ಬುಧವಾರ) |
| 8 | ಚುನಾವಣೆಯನ್ನು ಯಾವ ದಿನಾಂಕಕ್ಕೆ ಮುಂಚೆ ಮುಕ್ತಾಯಗೊಳಿಸಬೇಕೋ ಆ ದಿನಾಂಕ ಮತ್ತು ದಿನ | 05–03–2014 (ಬುಧವಾರ) |

**ಡಾ॥ ಡಿ.ಎಸ್. ವಿಶ್ವನಾಥ್, ಭಾ.ಆ.ಸೇ**
ಜಿಲ್ಲಾಧಿಕಾರಿ
ರಾಮನಗರ ಜಿಲ್ಲೆ, ರಾಮನಗರ

# ವಿಶೇಷ ರಾಜ್ಯ ಪತ್ರಿಕೆ

| ಭಾಗ – III | ಬೆಂಗಳೂರು, ಬುಧವಾರ, ಫೆಬ್ರವರಿ ೧೨, ೨೦೧೪ (ಮಾಘ ೨೩, ಶಕ ವರ್ಷ ೧೯೩೫) | ನಂ. ೧೦೯ |
|---|---|---|
| Part – III | Bangalore, Wednesday, February 12, 2014 (Magha 23, Shaka Varsha 1935) | No. 109 |


## ಜಿಲ್ಲಾಧಿಕಾರಿಗಳ ಕಾರ್ಯಾಲಯ, ಕೋಲಾರ ಜಿಲ್ಲೆ, ಕೋಲಾರ

**ಪ್ರಪತ್ರ –2**

(12(2)ನೇ ನಿಯಮವನ್ನು ನೋಡಿ)

(ಗ್ರಾಮ ಪಂಚಾಯತಿಗಳಿಗೆ ಚುನಾವಣೆಗಳ ಸಂದರ್ಭದಲ್ಲಿ ಉಪಯೋಗಕ್ಕಾಗಿ)

**ಅಧಿಸೂಚನೆ**

**ಸಂ. ಇಎಲ್ಎನ್(2)ಸಿಆರ್/28/2013–14, ದಿನಾಂಕ 12/02/2014**

**ಉಲ್ಲೇಖ : ರಾಚುಆ 39 ಇಜಿಪಿ(2)2013 ದಿನಾಂಕ : 10/02/2014**

(1) 1993 ರ ಕರ್ನಾಟಕ ಪಂಚಾಯತ್ ರಾಜ್ ಅಧಿನಿಯಮದ ಉಪಬಂಧಗಳ ಮೇರೆಗೆ ಕೋಲಾರ ಜಿಲ್ಲೆಗೆ ಸಂಬಂಧಿಸಿದಂತೆ, ಈ ಅಧಿಸೂಚನೆಗೆ ಲಗತ್ತಿಸಿರುವ ತ:ಖ್ತೆಯಲ್ಲಿ ನಮೂದಿಸಿರುವಂತೆ ಜಿಲ್ಲೆಯಲ್ಲಿ ವಿವಿಧ ಕಾರಣಗಳಿಂದ ತೆರವಾಗಿರುವ ಗ್ರಾಮ ಪಂಚಾಯಿತಿಯ ವಿವಿಧ ಕ್ಷೇತ್ರಗಳ ಸದಸ್ಯ ಸ್ಥಾನಗಳನ್ನು ತುಂಬಲು

(3) ಕೋಲಾರ ಜಿಲ್ಲೆಯ ಎಲ್ಲಾ 5 ತಾಲ್ಲೂಕುಗಳಲ್ಲಿನ ಇದರೊಂದಿಗೆ ಲಗತ್ತಿಸಿರುವ ತ:ಖ್ತೆಯಲ್ಲಿ ನಮೂದಿಸಿರುವ ಗ್ರಾಮ ಪಂಚಾಯ್ತಿಗಳಲ್ಲಿನ ಕೆಲವು ಸದಸ್ಯರ ಮರಣದಿಂದ ಮತ್ತು ಕೆಲವು ಸದಸ್ಯರ ರಾಜೀನಾಮೆಯಿಂದ ತೆರವಾಗಿರುವ ಸದಸ್ಯ ಸ್ಥಾನಗಳನ್ನು ತುಂಬಲು ಚುನಾವಣೆಗಳನ್ನು ನಡೆಸಬೇಕಾಗಿರುವುದರಿಂದ,

ಆದುದರಿಂದ, ಕರ್ನಾಟಕ ಪಂಚಾಯತ್ ರಾಜ್ (ಚುನಾವಣೆಗಳನ್ನು ನಡೆಸುವ) ನಿಯಮಗಳು 1993 ರ 12ನೇ ನಿಯಮಕ್ಕನುಸಾರವಾಗಿ ಕೋಲಾರ ಜಿಲ್ಲೆಯ ಡೆಪ್ಯುಟಿ ಕಮೀಷನರ್ ಆದ ಡಿ.ಕೆ.ರವಿ, ಭಾ.ಆ.ಸೇ., ಎಂಬ ಹೆಸರಿನ ನಾನು, ಸದರಿ ಚುನಾವಣೆಗೆ ಸಂಬಂಧಿಸಿದ ಈ ಕೆಳಕಂಡ ಕಾರ್ಯಕ್ರಮ ವೇಳಾಪಟ್ಟಿಯನ್ನು ಈ ಮೂಲಕ ನಿಗಧಿಪಡಿಸುತ್ತೇನೆ.

**ಚುನಾವಣಾ ವೇಳಾ ಪಟ್ಟಿ**

| | | |
|---|---|---|
| (ಎ) ನಾಮಪತ್ರಗಳನ್ನು ಸಲ್ಲಿಸಲು ಕೊನೆಯ ದಿನಾಂಕ ಮತ್ತು ದಿನ | : | 19–02–2014 (ಬುಧವಾರ) |
| (ಬಿ) ನಾಮಪತ್ರಗಳನ್ನು ಪರಿಶೀಲಿಸುವ ದಿನಾಂಕ ಮತ್ತು ದಿನ | : | 20–02–2014 (ಗುರುವಾರ) |
| (ಸಿ) ನಾಮಪತ್ರಗಳನ್ನು ಹಿಂತೆಗೆದುಕೊಳ್ಳುವ ಕೊನೆಯ ದಿನಾಂಕ ಮತ್ತು ದಿನ. | : | 22–02–2014 (ಶನಿವಾರ) |
| (ಡಿ) ಮತದಾನ ಅವಶ್ಯವಿದ್ದರೆ, ಮತದಾನವನ್ನು ನಡೆಸಬೇಕಾದ ದಿನಾಂಕ, ದಿನ ಮತ್ತು ಮತದಾನ ಸಮಯ | : | 02–03–2014 (ಭಾನುವಾರ) ಬೆಳಿಗ್ಗೆ 7–00 ಗಂಟೆಯಿಂದ ಸಂಜೆ 5–00 ಗಂಟೆಯವರೆಗೆ |
| (ಇ) ಮತಗಳ ಎಣಿಕೆ ದಿನಾಂಕ, ದಿನ, ಸ್ಥಳ ಮತ್ತು ಸಮಯ | : | 05–03–2014 (ಬುಧವಾರ) ಬೆಳಿಗ್ಗೆ 8–00 ಗಂಟೆಯಿಂದ ಆಯಾ ತಾಲ್ಲೂಕಿನ ಕೇಂದ್ರಸ್ಥಾನದಲ್ಲಿ |
| (ಎಫ್) ಚುನಾವಣೆಯನ್ನು ಯಾವ ದಿನಾಂಕಕ್ಕೆ ಮುಂಚೆ ಮುಕ್ತಾಯ ಗೊಳಿಸಬೇಕೋ ಆ ದಿನಾಂಕ ಮತ್ತು ದಿನ. | : | 05–03–2014 (ಬುಧವಾರ) |

**ಡಿ.ಕೆ. ರವಿ**
ಜಿಲ್ಲಾಧಿಕಾರಿಗಳು
ಕೋಲಾರ ಜಿಲ್ಲೆ, ಕೋಲಾರ

**ತ:ಖ್ತೆ**

**ಜಿಲ್ಲಾಧಿಕಾರಿಗಳ ಕಾರ್ಯಾಲಯ, ಕೋಲಾರ ಜಿಲ್ಲೆ, ಕೋಲಾರ**

**ಸಂ.ಇಎಲ್ಎನ್(2)ಸಿಆರ್/28/2013–14 ದಿನಾಂಕ 12/02/2014**

ಕೋಲಾರ ಜಿಲ್ಲೆಯ ಈ ಕೆಳಕಂಡ ತಾಲ್ಲೂಕುಗಳ ಗ್ರಾಮ ಪಂಚಾಯತಿಗಳಲ್ಲಿ ವಿವಿಧ ಕಾರಣಗಳಿಂದ ತೆರವಾಗಿರುವ ಗ್ರಾಮ ಪಂಚಾಯತಿ ಸದಸ್ಯ ಸ್ಥಾನಗಳಿಗೆ ಚುನಾವಣೆಯನ್ನು ನಡೆಸಲು ವೇಳಾಪಟ್ಟಿಯನ್ನು ನಿಗಧಿಪಡಿಸಿದೆ.

| ಕ್ರ. ಸಂ. | ತಾಲ್ಲೂಕಿನ ಹೆಸರು | ಗ್ರಾಮ ಪಂಚಾಯತಿಯ ಹೆಸರು | ಪ್ರಾದೇಶಿಕ ಚುನಾವಣಾ ಕ್ಷೇತ್ರದ ಸಂಖ್ಯೆ ಮತ್ತು ಹೆಸರು | ಖಾಲಿ ಸ್ಥಾನಗಳ ಸಂಖ್ಯೆ | ಸದಸ್ಯ ಸ್ಥಾನ ತೆರವಾಗಲು ಕಾರಣ | ಮೀಸಲಾತಿ ವಿವರ |
|---|---|---|---|---|---|---|
| 1 | 2 | 3 | 4 | 5 | 6 | 7 |
| 1 | ಕೋಲಾರ | 10.ಹೊನ್ನೇನಹಳ್ಳಿ | 2.ಹೊನ್ನೇನಹಳ್ಳಿ | 1 (ಒಂದು) | ಶ್ರೀ.ಹನುಮಂತಪ್ಪ ಬಿನ್ ಲೇಟ್ ಮುಳಾಗಲಪ್ಪ, ನಡುಪಳ್ಳಿ, ಕೋಲಾರ ತಾಲ್ಲೂಕು ರವರ ಮರಣದಿಂದ | ಪರಿಶಿಷ್ಟ ಜಾತಿ |
| 2 | ಕೋಲಾರ | 32.ತೊಟ್ಲಿ | 1.ತೊಟ್ಲಿ | 1 (ಒಂದು) | ಶ್ರೀ.ಮುನಿಯಪ್ಪ ಬಿನ್ ಮುನಿಶಾಮಪ್ಪ, ತೊಟ್ಲಿ, ಕೋಲಾರ ತಾಲ್ಲೂಕು ರವರ ಮರಣದಿಂದ | ಪರಿಶಿಷ್ಟ ಜಾತಿ |
| 3 | ಮಾಲೂರು | 24.ಚಿಕ್ಕತಿರುಪತಿ | 1.ಚಿಕ್ಕತಿರುಪತಿ | 1 (ಒಂದು) | ಶ್ರೀ.ರಾಮಪ್ರಸಾದ್ ಬಿನ್ ಟಿ.ಕೆ.ಮುನಿಯಪ್ಪ, ಚಿಕ್ಕತಿರುಪತಿ ರವರ ರಾಜೀನಾಮೆಯಿಂದ | ಹಿಂದುಳಿದ ವರ್ಗ 'ಅ' |
| 4 | ಮಾಲೂರು | 28.ದಿನ್ನಹಳ್ಳಿ | 8.ದುಡುವನಹಳ್ಳಿ | 1 (ಒಂದು) | ಶ್ರೀಮತಿ.ಪಾಪಮ್ಮ ಕೋಂ ಮುನಿಶಾಮಪ್ಪ, ದುಡುವನಹಳ್ಳಿ ರವರ ಮರಣದಿಂದ | ಪರಿಶಿಷ್ಟ ಜಾತಿ (ಮಹಿಳೆ) |
| 5 | ಬಂಗಾರಪೇಟೆ | 1.ಸೂಲಿಕುಂಟೆ | 5.ಸಿದ್ದನಹಳ್ಳಿ–2 | 1 (ಒಂದು) | ಶ್ರೀ.ಆರ್.ನಾರಾಯಣಸ್ವಾಮಿ ಬಿನ್ ರಾಜಪ್ಪ, ಅಕ್ಷಂತರ ಗೊಲ್ಲಹಳ್ಳಿ, ಬಂಗಾರಪೇಟೆ ರವರ ಮರಣದಿಂದ | ಹಿಂದುಳಿದ ವರ್ಗ 'ಅ' |
| 6 | ಬಂಗಾರಪೇಟೆ | 1.ಸೂಲಿಕುಂಟೆ | 5.ಸಿದ್ದನಹಳ್ಳಿ–2 | 1 (ಒಂದು) | ಶ್ರೀ.ಶ್ರೀನಿವಾಸಪ್ಪ ಬಿನ್ ಹನುಮಪ್ಪ, ಮಾದಿಗರಹಳ್ಳಿ, ಬಂಗಾರಪೇಟೆ ತಾಲ್ಲೂಕು ರವರ ಮರಣದಿಂದ | ಪರಿಶಿಷ್ಟ ಜಾತಿ |
| 7 | ಬಂಗಾರಪೇಟೆ | 16.ಹುಲಿಬೆಲೆ | 7.ತೊರಗನದೊಡ್ಡಿ | 1 (ಒಂದು) | ಶ್ರೀ.ವೆಂಕಟೇಶಪ್ಪ ಬಿನ್ ದೊಡ್ಡಮುಳಬಾಗಲಪ್ಪ, ತೊರಗನದೊಡ್ಡಿ, ಹುಲಿಬೆಲೆ ಅಂಚೆ, ಬಂಗಾರಪೇಟೆ ತಾ: ರವರ ಮರಣದಿಂದ | ಪರಿಶಿಷ್ಟ ಜಾತಿ |
| 8 | ಮುಳಬಾಗಿಲು | 15.ಆಲಂಗೂರು | 1.ಆಲಂಗೂರು | 1 (ಒಂದು) | ಶ್ರೀಮತಿ.ಮುನಿವೆಂಕಟಮ್ಮ ಬಿನ್ ಮಾರಪ್ಪ, ಆಲಂಗೂರು ಗ್ರಾಮ ಮತ್ತು ಅಂಚೆ, ಮುಳಬಾಗಿಲು ತಾ: ರವರ ಮರಣದಿಂದ | ಪರಿಶಿಷ್ಟ ಜಾತಿ (ಮಹಿಳೆ) |
| 9 | ಮುಳಬಾಗಿಲು | 28.ಅಂಗೊಂಡಹಳ್ಳಿ | 5.ಬೊಮ್ಮಸಂದ್ರ | 1 (ಒಂದು) | ಶ್ರೀ.ಬಿ.ವಿ.ವೆಂಕಟರಮಣ ಬಿನ್ ವೆಂಕಟೇಶಪ್ಪ, ಬೊಮ್ಮಸಂದ್ರ ಗ್ರಾಮ, ಬಲ್ಲ ಅಂಚೆ, ಮುಳಬಾಗಿಲು ತಾ: ರವರ ಮರಣದಿಂದ | ಸಾಮಾನ್ಯ |
| 10 | ಶ್ರೀನಿವಾಸಪುರ | 16.ಜೆ.ತಿಮ್ಮಸಂದ್ರ | 5.ಕಲ್ಲೂರು | 1 (ಒಂದು) | ಶ್ರೀ.ಕೆ.ಕೆ.ಮಂಜುನಾಥ ಬಿನ್ ಕಿಟ್ಟಪ್ಪ, ಕಲ್ಲೂರು ಗ್ರಾಮ ಮತ್ತು ಅಂಚೆ, ಕಸಬಾ ಹೋಬಳಿ, ಶ್ರೀನಿವಾಸಪುರ ರವರ ರಾಜೀನಾಮೆಯಿಂದ | ಸಾಮಾನ್ಯ |
| 11 | ಶ್ರೀನಿವಾಸಪುರ | 20.ಚಲ್ದಿಗಾನಹಳ್ಳಿ | 8.ಕೇತಗಾನಹಳ್ಳಿ | 1 (ಒಂದು) | ಶ್ರೀ.ಓಬಳಪ್ಪ ಬಿನ್ ವೆಂಕಟಶಾಮಿ, ಕೇತಗಾನಹಳ್ಳಿ, ಕಸಬಾ ಹೋಬಳಿ, ಶ್ರೀನಿವಾಸಪುರ ತಾಲ್ಲೂಕು ರವರ ಮರಣದಿಂದ | ಪರಿಶಿಷ್ಟ ಜಾತಿ |
| 12 | ಶ್ರೀನಿವಾಸಪುರ | 22.ಮಾಸ್ತೇನಹಳ್ಳಿ | 1.ಮಾಸ್ತೇನಹಳ್ಳಿ | 1 (ಒಂದು) | ಶ್ರೀಮತಿ.ಆಂಜಮ್ಮ ಕೋಂ ಚನ್ನಕೃಷ್ಣಪ್ಪ, ಮಾಸ್ತೇನಹಳ್ಳಿ ಶ್ರೀನಿವಾಸಪುರ ತಾಲ್ಲೂಕು ರವರ ಮರಣದಿಂದ | ಪರಿಶಿಷ್ಟ ಜಾತಿ (ಮಹಿಳೆ) |

**ಡಿ.ಕೆ. ರವಿ**
ಜಿಲ್ಲಾಧಿಕಾರಿಗಳು
ಕೋಲಾರ ಜಿಲ್ಲೆ, ಕೋಲಾರ

ವಿಶೇಷ ರಾಜ್ಯ ಪತ್ರಿಕೆ

| ಭಾಗ – III | ಬೆಂಗಳೂರು, ಬುಧವಾರ, ಫೆಬ್ರವರಿ ೧೨, ೨೦೧೪ (ಮಾಘ ೨೩, ಶಕ ವರ್ಷ ೧೯೩೫) | ನಂ. ೧೧೧ |
|---|---|---|
| Part – III | Bangalore, Wednesday, February 12, 2014 (Magha 23, Shaka Varsha 1935) | No. 111 |

## ಜಿಲ್ಲಾಧಿಕಾರಿಗಳ ಕಾರ್ಯಾಲಯ, ಬೆಂಗಳೂರು ಗ್ರಾಮಾಂತರ ಜಿಲ್ಲೆ, ಬೆಂಗಳೂರು

### ಪತ್ರಿಕಾ ಪ್ರಕಟಣೆ

**ಸಂಖ್ಯೆ: ಇಎಲ್ಎನ್(ಪಂ)ಸಿಆರ್.06/13-14, ದಿನಾಂಕ: 12-02-2014**

ಬೆಂಗಳೂರು ಗ್ರಾಮಾಂತರ ಜಿಲ್ಲಾ ವ್ಯಾಪ್ತಿಯ ಹೊಸಕೋಟೆ, ದೊಡ್ಡಬಳ್ಳಾಪುರ ಮತ್ತು ನೆಲಮಂಗಲ ತಾಲ್ಲೂಕುಗಳ ಈ ಕೆಳಕಾಣಿಸಿದ ಗ್ರಾಮ ಪಂಚಾಯಿತಿ ಕ್ಷೇತ್ರಗಳಲ್ಲಿ ವಿವಿಧ ಕಾರಣಗಳಿಂದ ತೆರವಾಗಿರುವ ಸದಸ್ಯ ಸ್ಥಾನಗಳಿಗೆ ರಾಜ್ಯ ಚುನಾವಣಾ ಆಯೋಗದ ಆದೇಶ ಸಂಖ್ಯೆ: ರಾಚುಆ:39.ಇಜಿಪಿ(2)2013 ದಿನಾಂಕ: 10.02.2014ರಂತೆ ಚುನಾವಣೆ ನಡೆಯಲಿದೆ. ಸದರಿ ಚುನಾವಣೆಗೆ ಸಂಬಂಧಿಸಿದಂತೆ, ಚುನಾವಣಾ ವೇಳಾಪಟ್ಟಿಯನ್ನು ಈ ಕೆಳಕಾಣಿಸಿದಂತೆ ನಿಗಧಿ ಪಡಿಸಲಾಗಿದೆ.

| ಕ್ರ. ಸಂ | ತಾಲ್ಲೂಕು | ಗ್ರಾಮ ಪಂಚಾಯಿತಿ ಹೆಸರು | ಕ್ಷೇತ್ರದ ಸಂಖ್ಯೆ ಮತ್ತು ಹೆಸರು | ತೆರವಾಗಿರುವ ಸದಸ್ಯ ಸ್ಥಾನಗಳ ಸಂಖ್ಯೆ | ಮೀಸಲಾತಿ ವಿವರ | ಸದಸ್ಯ ಸ್ಥಾನ ತೆರವಾಗಲು ಕಾರಣ |
|---|---|---|---|---|---|---|
| 1 | 2 | 3 | 3 | 4 | 5 | 6 |
| 1 | ದೊಡ್ಡಬಳ್ಳಾಪುರ | 11-ಹಾಡೋನಹಳ್ಳಿ | 5-ಲಕ್ಷ್ಮೀದೇವಿಪುರ | 1 | ಹಿಂ.ವ.ಎ(ಮ) | ಮರಣ |
| 2 | | 15-ತಿಪ್ಪೂರು | 3-ಸುತ್ತಹಳ್ಳಿ | 1 | ಸಾಮಾನ್ಯ (ಮ) | ಮರಣ |
| 3 | | 23-ಹೊಸಹಳ್ಳಿ | 4-ಗುಂಡಂಗೆರೆ-2 | 1 | ಸಾಮಾನ್ಯ | ರಾಜೀನಾಮೆ |
| 4 | ಹೊಸಕೋಟೆ | 01-ಇಟ್ಟಸಂದ್ರ | 5-ಚೀಮಸಂದ್ರ | 1 | ಪ.ಪಂ(ಮ) | ಮರಣ |
| 5 | | 24-ಕಲ್ಕುಂಟೆಅಗ್ರಹಾರ | 1-ಕಲ್ಕುಂಟೆಅಗ್ರಹಾರ | 1 | ಹಿಂ.ವ.ಬಿ | ಮರಣ |
| 6 | ನೆಲಮಂಗಲ | 15-ನರಸೀಪುರ | 4-ಮಾಕೇನಹಳ್ಳಿ | 1 | ಹಿಂ.ವ.ಎ.(ಮ) | ಮರಣ |

| | | |
|---|---|---|
| 1. | ನಾಮಪತ್ರಗಳನ್ನು ಸಲ್ಲಿಸಲು ಕೊನೆಯ ದಿನಾಂಕ ಮತ್ತು ದಿನ | 19-02-2014 (ಬುಧವಾರ) |
| 2. | ನಾಮಪತ್ರಗಳನ್ನು ಪರಿಶೀಲಿಸುವ ದಿನಾಂಕ ಮತ್ತು ದಿನ | 20-02-2014 (ಗುರುವಾರ) |
| 3. | ಉಮೇದುವಾರಿಕೆಗಳನ್ನು ಹಿಂತೆಗೆದುಕೊಳ್ಳುವ ಕೊನೆಯ ದಿನಾಂಕ ಮತ್ತು ದಿನ | 22-02-2014 (ಶನಿವಾರ) |
| 4. | ಮತದಾನ ಅವಶ್ಯವಿದ್ದರೆ, ಮತದಾನವನ್ನು ನಡೆಸಬೇಕಾದ ದಿನಾಂಕ ಮತ್ತು ದಿನ (ಮತದಾನ ಸಮಯ ಬೆಳಗ್ಗೆ 7.00 ಗಂಟೆಯಿಂದ ಸಾಯಂಕಾಲ 5.00 ಗಂಟೆಯವರೆಗೆ) | 02-03-2014 (ಭಾನುವಾರ) |
| 5. | ಮರು ಮತದಾನ ಅವಶ್ಯವಿದ್ದರೆ, ಮರು ಮತದಾನವನ್ನು ನಡೆಸಬೇಕಾದ ದಿನಾಂಕ ಮತ್ತು ದಿನ | 04-03-2014 (ಮಂಗಳವಾರ) |
| 6. | ಮತ ಎಣಿಕೆ ದಿನಾಂಕ ಮತ್ತು ದಿನ (ತಾಲ್ಲೂಕು ಕೇಂದ್ರ ಸ್ಥಳದಲ್ಲಿ ಬೆಳಗ್ಗೆ 8.00 ಗಂಟೆಯಿಂದ) | 05-03-2014 (ಬುಧವಾರ) |
| 7. | ಚುನಾವಣೆಯನ್ನು ಯಾವ ದಿನಾಂಕಕ್ಕೆ ಮುಂಚೆ ಮುಕ್ತಾಯಗೊಳಿಸಬೇಕೋ ಆ ದಿನಾಂಕ ಮತ್ತು ದಿನ | 05-03-2014 (ಬುಧವಾರ) |

**ವಿ. ಶಂಕರ್**
ಜಿಲ್ಲಾಧಿಕಾರಿ
ಬೆಂಗಳೂರು ಗ್ರಾಮಾಂತರ ಜಿಲ್ಲೆ

ವಿಶೇಷ ರಾಜ್ಯ ಪತ್ರಿಕೆ

| ಭಾಗ – III<br>Part – III | ಬೆಂಗಳೂರು, ಬುಧವಾರ, ಫೆಬ್ರವರಿ ೧೨, ೨೦೧೪ (ಮಾಘ ೨೩, ಶಕ ವರ್ಷ ೧೯೩೫)<br>Bangalore, Wednesday, February 12, 2014 (Magha 23, Shaka Varsha 1935) | ನಂ. ೧೧೨<br>No. 112 |
|---|---|---|

## ಜಿಲ್ಲಾಧಿಕಾರಿಗಳ ಕಾರ್ಯಾಲಯ, ಚಿತ್ರದುರ್ಗ ಜಿಲ್ಲೆ, ಚಿತ್ರದುರ್ಗ

**ಪ್ರಪತ್ರ –2**

(12(2)ನೇ ನಿಯಮವನ್ನು ನೋಡಿ)

**ಅಧಿಸೂಚನೆ**

**ನಂ. ಚುನಾವಣೆ:ಸಿಆರ್:70/2013–14, ದಿನಾಂಕ: 12–02–2014**

1993ರ ಕರ್ನಾಟಕ ಪಂಚಾಯತ್ ರಾಜ್ ಅಧಿನಿಯಮ ಉಪಬಂಧಗಳ ಮೇರೆಗೆ ಚಿತ್ರದುರ್ಗ ಜಿಲ್ಲೆಯ ಅನುಬಂಧದಲ್ಲಿ ತೋರಿಸಿರುವಂತೆ ಗ್ರಾಮ ಪಂಚಾಯ್ತಿಗಳ ವಿವಿಧ ಕಾರಣಗಳಿಂದ ತೆರವಾದ ಸದಸ್ಯ ಸ್ಥಾನಗಳನ್ನು ತುಂಬಲು ಚುನಾವಣೆ ನಡೆಸಬೇಕಾಗಿರುತ್ತದೆ.

ತೆರವಾದ ಸ್ಥಾನಗಳಿಗೆ ಕರ್ನಾಟಕ ಪಂಚಾಯತ್ ರಾಜ್ (ಚುನಾವಣೆಗಳನ್ನು ನಡೆಸುವ) ನಿಯಮಗಳು **1993ರ 12ನೇ ನಿಯಮಕ್ಕೆ** ಅನುಸಾರವಾಗಿ ಚಿತ್ರದುರ್ಗ ಜಿಲ್ಲೆಯ ಜಿಲ್ಲಾಧಿಕಾರಿಯಾದ ವಿ.ಪಿ.ಇಕ್ಕೇರಿ ಎಂಬ ಹೆಸರಿನ ನಾನು ಸದರಿ ಚುನಾವಣೆಗೆ ಸಂಭಂಧಿಸಿದ ಈ ಕೆಳಕಂಡ ಕಾರ್ಯಕ್ರಮಗಳ ವೇಳಾಪಟ್ಟಿಯನ್ನು ಈ ಮೂಲಕ ನಿಗಧಿಪಡಿಸಿರುತ್ತೇನೆ.

1. ನಾಮಪತ್ರಗಳನ್ನು ಸಲ್ಲಿಸಲು ಕೊನೆಯ ದಿನಾಂಕ ಮತ್ತು ದಿನ : 19.02.2014 (ಬುಧವಾರ)
2. ನಾಮಪತ್ರಗಳನ್ನು ಪರಿಶೀಲಿಸುವ ದಿನಾಂಕ ಮತ್ತು ದಿನ : 20.02.2014 (ಗುರುವಾರ)
3. ಉಮೇದುವಾರಿಕೆಗಳನ್ನು ಹಿಂತೆಗೆದುಕೊಳ್ಳಲು ಕೊನೆಯ ದಿನಾಂಕ ಮತ್ತು ದಿನ : 22.02.2014 (ಶನಿವಾರ)
4. ಮತದಾನ ಅವಶ್ಯವಿದ್ದರೆ, ಮತದಾನವನ್ನು ನಡೆಸಬೇಕಾದ ದಿನಾಂಕ ಮತ್ತು ದಿನ : 02.03.2014 (ಭಾನುವಾರ)
5. ಮರು ಮತದಾನ ಅವಶ್ಯವಿದ್ದರೆ, ಮರು ಮತದಾನವನ್ನು ನಡೆಸಬೇಕಾದ ದಿನಾಂಕ ಮತ್ತು ದಿನ : 04.03.2014 (ಮಂಗಳವಾರ)

   (ಮತದಾನದ ಸಮಯ ಬೆಳಗ್ಗೆ 7.00 ಘಂಟೆಯಿಂದ ಸಾಯಂಕಾಲ 5.00 ಗಂಟೆಯವರೆಗೆ)
6. ಮತಗಳ ಎಣಿಕೆ ಬೆಳಿಗ್ಗೆ 8.00 ಗಂಟೆಯಿಂದ (ತಾಲ್ಲೂಕಿನ ಕೇಂದ್ರ ಸ್ಥಳದಲ್ಲಿ) : 05.03.2014 (ಬುಧವಾರ)
7. ಚುನಾವಣೆಯನ್ನು ಯಾವ ದಿನಾಂಕಕ್ಕೆ ಮುಂಚೆ ಮುಕ್ತಾಯಗೊಳಿಸಬೇಕೋ ಆ ದಿನಾಂಕ ಮತ್ತು ದಿನ : 05.03.2014 (ಬುಧವಾರ)

**ವಿ.ಪಿ. ಇಕ್ಕೇರಿ**
ಜಿಲ್ಲಾಧಿಕಾರಿಗಳು
ಚಿತ್ರದುರ್ಗ ಜಿಲ್ಲೆ

**ಅನುಬಂಧ**

| ಕ್ರಸಂ | ಜಿಲ್ಲೆ | ತಾಲ್ಲೂಕಿನ ಹೆಸರು | ಗ್ರಾಮ ಪಂಚಾಯ್ತಿ ಹೆಸರು | ತೆರವಾಗಿರುವ ಕ್ಷೇತ್ರದ ಸಂಖ್ಯೆ ಮತ್ತು ಹೆಸರು | ಸದಸ್ಯ ಸ್ಥಾನಗಳ ಸಂಖ್ಯೆ | ಖಾಲಿ ಸ್ಥಾನದ ಮೀಸಲಾತಿ ವಿವರ |
|---|---|---|---|---|---|---|
| 1 | 2 | 3 | 4 | 5 | 6 | 7 |
| 1 | ಚಿತ್ರದುರ್ಗ | ಮೊಳಕಾಲ್ಮೂರು | 3.ಜಹಗೀರ್ ಬುಡ್ಡೇನಹಳ್ಳಿ | 5.ಹೊಸದಡಗೂರು | 1 | ಅನುಸೂಚಿತ ಜಾತಿ |
| 2 | ಚಿತ್ರದುರ್ಗ | ಮೊಳಕಾಲ್ಮೂರು | 8.ಹಿರೇಕೆರೆಹಳ್ಳಿ | 3.ಗುಡ್ಡದಹಳ್ಳಿ | 1 | ಅನುಸೂಚಿತ ಪಂಗಡ (ಮ) |
| 3 | ಚಿತ್ರದುರ್ಗ | ಚಿತ್ರದುರ್ಗ | 19.ದ್ಯಾಮವ್ವನಹಳ್ಳಿ | 4.ಲಿಂಗಾವರಹಟ್ಟಿ | 1 | ಅನುಸೂಚಿತ ಪಂಗಡ |
| 4 | ಚಿತ್ರದುರ್ಗ | ಚಿತ್ರದುರ್ಗ | 20.ಮದಕರಿಪುರ | 2.ಮದಕರಿಪುರ–2 | 1 | ಸಾಮಾನ್ಯ |
| 5 | ಚಿತ್ರದುರ್ಗ | ಚಿತ್ರದುರ್ಗ | 20.ಮದಕರಿಪುರ | 4.ಪಿಳ್ಳೇಕೇರನಹಳ್ಳಿ | 1 | ಅನುಸೂಚಿತ ಜಾತಿ |
| 6 | ಚಿತ್ರದುರ್ಗ | ಚಿತ್ರದುರ್ಗ | 31.ಇಂಗಳದಾಳ್ | 5.ಯರೇಹಳ್ಳಿ | 1 | ಅನುಸೂಚಿತ ಪಂಗಡ (ಮ) |

| ಕ್ರ.ಸಂ | ಜಿಲ್ಲೆ | ತಾಲ್ಲೂಕಿನ ಹೆಸರು | ಗ್ರಾಮ ಪಂಚಾಯ್ತಿ ಹೆಸರು | ತೆರವಾಗಿರುವ ಕ್ಷೇತ್ರದ ಸಂಖ್ಯೆ ಮತ್ತು ಹೆಸರು | ಸದಸ್ಯ ಸ್ಥಾನಗಳ ಸಂಖ್ಯೆ | ಖಾಲಿ ಸ್ಥಾನದ ಮೀಸಲಾತಿ ವಿವರ |
|---|---|---|---|---|---|---|
| 7 | ಚಿತ್ರದುರ್ಗ | ಹಿರಿಯೂರು | 3.ಮದಕರಿನಾಯಕನ ಕೋಟೆ | 3.ಸೊಂಡೇಕೆರೆ–1 | 1 | ಸಾಮಾನ್ಯ |
| 8 | ಚಿತ್ರದುರ್ಗ | ಹೊಳಲ್ಕೆರೆ | 10.ಚಿತ್ರಹಳ್ಳಿ | 1.ಚಿತ್ರಹಳ್ಳಿ | 1 | ಸಾಮಾನ್ಯ (ಮ) |

**ವಿ.ಪಿ. ಇಕ್ಕೇರಿ**
ಜಿಲ್ಲಾಧಿಕಾರಿಗಳು
ಚಿತ್ರದುರ್ಗ ಜಿಲ್ಲೆ

# ವಿಶೇಷ ರಾಜ್ಯ ಪತ್ರಿಕೆ

| ಭಾಗ – III | ಬೆಂಗಳೂರು, ಬುಧವಾರ, ಫೆಬ್ರವರಿ ೧೨, ೨೦೧೪ (ಮಾಘ ೨೩, ಶಕ ವರ್ಷ ೧೯೩೫) | ನಂ. ೧೧೩ |
|---|---|---|
| Part – III | Bangalore, Wednesday, February 12, 2014 (Magha 23, Shaka Varsha 1935) | No. 113 |

## ಜಿಲ್ಲಾಧಿಕಾರಿಗಳ ಕಾರ್ಯಾಲಯ, ಬೆಂಗಳೂರು ಜಿಲ್ಲೆ, ಬೆಂಗಳೂರು

**ಪ್ರಪತ್ರ –2**

(12(2)ನೇ ನಿಯಮವನ್ನು ನೋಡಿ)

**(ಗ್ರಾಮ ಪಂಚಾಯತಿಗಳಿಗೆ ಉಪ ಚುನಾವಣೆಗಳ ಸಂದರ್ಭದಲ್ಲಿ ಉಪಯೋಗಕ್ಕಾಗಿ)**

**ಅಧಿಸೂಚನೆ**

**ಸಂಖ್ಯೆ: ಚುನಾ(ಗ್ರಾ.ಪಂ)(ಉ.ಚು)ಸಿಆರ್:01:2013–14, ದಿನಾಂಕ: 12–02–2014**

(1) ಕರ್ನಾಟಕ ಪಂಚಾಯತ್ ರಾಜ್ ಅಧಿನಿಯಮ 1993ರ ಕಲಂ.12ರ ಉಪ ಬಂಧಗಳ ಮೇರೆಗೆ ಬೆಂಗಳೂರು ನಗರ ಜಿಲ್ಲೆಗೆ ಸಂಬಂಧಿಸಿದಂತೆ, ವಿವಿಧ ಕಾರಣಗಳಿಂದ ತೆರವಾಗಿರುವ ಗ್ರಾಮ ಪಂಚಾಯತಿಯ ಸದಸ್ಯರ ಸ್ಥಾನಗಳನ್ನು ತುಂಬಲು ಉಪ ಚುನಾವಣೆ;

(2) ಬೆತ್ತನಗೆರೆ, 4–ಕೊಡಗಲಹಟ್ಟಿ, ರಾಮಗೊಂಡನಹಳ್ಳಿ ಮತ್ತು ತರಬನಹಳ್ಳಿ ಸಾಸುವೆಘಟ್ಟ ಕ್ಷೇತ್ರ: ಚುನಾವಣಾ ಕ್ಷೇತ್ರಗಳಿಂದ ಕ್ರಮವಾಗಿ ಹುಸ್ಕೂರು, ಹುಣಸಮಾರನಹಳ್ಳಿ, ಗಂಟಿಗಾನಹಳ್ಳಿ ಮತ್ತು ಹುರಳಿಚಿಕ್ಕನಹಳ್ಳಿ ಗ್ರಾಮ ಪಂಚಾಯಿತಿಗಳಲ್ಲಿ ಸದಸ್ಯರ ನಿಧನದಿಂದ ತೆರವಾದ ಸ್ಥಾನಗಳನ್ನು ತುಂಬಲು;

(3) ಶ್ರೀನಿವಾಸ ಬಿನ್ ಹನುಮಂತಯ್ಯ, ಮುನಿರತ್ನ ಕೋಂ ಮಂಜುನಾಥ್, ನಾರಾಯಣಪ್ಪ ಬಿನ್ ಬುಡ್ಡಪ್ಪ ಮತ್ತು ಯಲ್ಲಪ್ಪ ಬಿನ್ ಮುನಿಸ್ವಾಮಪ್ಪ ರವರುಗಳ ನಿಧನದಿಂದ ಸದರಿ ಸ್ಥಾನಗಳು ಖಾಲಿಯಾಗಿರುವುದರಿಂದ ಸ್ಥಾನವನ್ನು ತುಂಬಲು: ಚುನಾವಣೆಗಳನ್ನು ನಡೆಸಬೇಕಾಗಿರುವುದರಿಂದ;

ಆದುದರಿಂದ ಕರ್ನಾಟಕ ಪಂಚಾಯತ್ ರಾಜ್ (ಚುನಾವಣೆಗಳನ್ನು ನಡೆಸುವ) ನಿಯಮಗಳು 1993ರ 12ನೇ ಕಲಂ.ನ ಅನುಸಾರ ದತ್ತವಾದ ಅಧಿಕಾರದ ಮೇರೆಗೆ **ಡಾ|| ಜಿ.ಸಿ.ಪ್ರಕಾಶ್, ಭಾ.ಆ.ಸೇ.**, ಜಿಲ್ಲಾಧಿಕಾರಿ, ಬೆಂಗಳೂರು ನಗರ ಜಿಲ್ಲೆ ಆದ ನಾನು, ಸದರಿ ಚುನಾವಣೆಗೆ ಸಂಬಂಧಿಸಿದ ಈ ಕೆಳಕಂಡ ಕಾರ್ಯಕ್ರಮ ವೇಳಾಪಟ್ಟಿಯನ್ನು ಈ ಮೂಲಕ ನಿಗದಿಪಡಿಸುತ್ತೇನೆ.

| | | |
|---|---|---|
| 1) | ನಾಮಪತ್ರಗಳನ್ನು ಸಲ್ಲಿಸಲು ಕೊನೆಯ ದಿನಾಂಕ ಮತ್ತು ದಿನ | ದಿನಾಂಕ: 19–02–2014 (ಬುಧವಾರ) |
| 2) | ನಾಮಪತ್ರಗಳನ್ನು ಪರಿಶೀಲಿಸುವ ದಿನಾಂಕ ಮತ್ತು ದಿನ | ದಿನಾಂಕ: 20–02–2014 (ಗುರುವಾರ) (ಬೆಳಿಗ್ಗೆ 11.00 ಗಂಟೆಗೆ) |
| 3) | ಉಮೇದುವಾರಿಕೆಗಳನ್ನು ಹಿಂತೆಗೆದುಕೊಳ್ಳಲು ಕೊನೆಯ ದಿನಾಂಕ ಮತ್ತು ದಿನ | ದಿನಾಂಕ: 22–02–2014 (ಶನಿವಾರ) (ಮಧ್ಯಾಹ್ನ 3.00 ಗಂಟೆವರೆಗೆ) |
| 4) | ಮತದಾನದ ಅವಶ್ಯವಿದ್ದರೆ, ಮತದಾನವನ್ನು ನಡೆಸಬೇಕಾದ ದಿನಾಂಕ ಮತ್ತು ದಿನ (ಮತದಾನದ ಸಮಯ ಬೆಳಿಗ್ಗೆ 7.00 ಗಂಟೆಯಿಂದ ಸಾಯಂಕಾಲ 5.00 ಗಂಟೆಯವರೆಗೆ) | ದಿನಾಂಕ: 02–03–2014 (ಭಾನುವಾರ) |
| 5) | ಮರು ಮತದಾನ ಅವಶ್ಯವಿದ್ದರೆ, ಮರು ಮತದಾನವನ್ನು ನಡೆಸಬೇಕಾದ ದಿನಾಂಕ ಮತ್ತು ದಿನ (ಮತದಾನದ ಸಮಯ ಬೆಳಿಗ್ಗೆ 7.00 ಗಂಟೆಯಿಂದ ಸಾಯಂಕಾಲ 5.00 ಗಂಟೆಯವರೆಗೆ) | ದಿನಾಂಕ: 04–03–2014 (ಮಂಗಳವಾರ) |
| 6) | ಮತಗಳ ಎಣಿಕೆ ಬೆಳಿಗ್ಗೆ 8.00 ಗಂಟೆಯಿಂದ (ತಾಲ್ಲೂಕಿನ ಕೇಂದ್ರ ಸ್ಥಳದಲ್ಲಿ) | ದಿನಾಂಕ: 05–03–2014 (ಬುಧವಾರ) |
| 7) | ಚುನಾವಣೆಯನ್ನು ಯಾವ ದಿನಾಂಕಕ್ಕೆ ಮುಂಚೆ ಮುಕ್ತಾಯಗೊಳಿಸಬೇಕೋ ಆ ದಿನಾಂಕ ಮತ್ತು ದಿನ | ದಿನಾಂಕ: 05–03–2014 (ಬುಧವಾರ) |

**ಡಾ|| ಜಿ.ಸಿ.ಪ್ರಕಾಶ್**
ಜಿಲ್ಲಾಧಿಕಾರಿಗಳು
ಹಾಗೂ ಜಿಲ್ಲಾ ಚುನಾವಣಾಧಿಕಾರಿಗಳು
ಬೆಂಗಳೂರು ಜಿಲ್ಲೆ, ಬೆಂಗಳೂರು

# ವಿಶೇಷ ರಾಜ್ಯ ಪತ್ರಿಕೆ

| ಭಾಗ – III | ಬೆಂಗಳೂರು, ಬುಧವಾರ, ಫೆಬ್ರವರಿ ೧೨, ೨೦೧೪ (ಮಾಘ ೨೩, ಶಕ ವರ್ಷ ೧೯೩೫) | ನಂ. ೧೧೪ |
|---|---|---|
| Part – III | Bangalore, Wednesday, February 12, 2014 (Magha 23, Shaka Varsha 1935) | No. 114 |


## ಜಿಲ್ಲಾಧಿಕಾರಿಗಳ ಕಾರ್ಯಾಲಯ, ಬೆಂಗಳೂರು ಜಿಲ್ಲೆ, ಬೆಂಗಳೂರು

**ಪ್ರಪತ್ರ – 1**

(12(2)ನೇ ನಿಯಮವನ್ನು ನೋಡಿ)

**(ತಾಲ್ಲೂಕು ಪಂಚಾಯತಿಗಳ ಉಪ ಚುನಾವಣೆಗಳ ಸಂದರ್ಭದಲ್ಲಿ ಉಪಯೋಗಕ್ಕಾಗಿ)**

**ಅಧಿಸೂಚನೆ**

**ಸಂಖ್ಯೆ: ಚುನಾ(ತಾ.ಪಂ)(ಉ.ಚು)ಸಿಆರ್:01:2013–14, ದಿನಾಂಕ: 12–02–2014**

(1) 1993ರ ಕರ್ನಾಟಕ ಪಂಚಾಯತ್ ರಾಜ್ ಅಧಿನಿಯಮದ ಉಪಬಂಧಗಳ ಮೇರೆಗೆ ಬೆಂಗಳೂರು ನಗರ ಜಿಲ್ಲೆಗೆ ಸಂಬಂಧಿಸಿದಂತೆ, ಬೆಂಗಳೂರು ಉತ್ತರ ತಾಲ್ಲೂಕು ಪಂಚಾಯಿತಿಯ ಈ ಅಧಿಸೂಚನೆಯ ತಃಖ್ತೆಯಲ್ಲಿ ನಮೂದಿಸಿರುವ ಚುನಾವಣಾ ಕ್ಷೇತ್ರದಿಂದ ಬೆಂಗಳೂರು ಉತ್ತರ ತಾಲ್ಲೂಕು ಪಂಚಾಯಿತಿಗೆ ಚುನಾಯಿತ ಸದಸ್ಯರ ಸ್ಥಾನವನ್ನು ತುಂಬಲು,

(2) ಸದಸ್ಯರ ರಾಜೀನಾಮೆಯಿಂದ ಸ್ಥಾನವನ್ನು ಖಾಲಿಯಾಗಿರುವುದಾಗಿ ಘೋಷಿಸಿರುವುದರಿಂದಾಗಿ ಉಂಟಾದ ಖಾಲಿ ಸದಸ್ಯ ಸ್ಥಾನವನ್ನು ತುಂಬಲು ಚುನಾವಣೆಯನ್ನು ನಡೆಸಬೇಕಾಗಿರುವುದರಿಂದ,

ಆದುದರಿಂದ, ಕರ್ನಾಟಕ ಪಂಚಾಯತ್ ರಾಜ್ (ಚುನಾವಣೆಗಳನ್ನು ನಡೆಸುವ) ನಿಯಮಗಳು 1993ರ 12ನೇ ಕಲಂ.ನ ಅನುಸಾರ ದತ್ತವಾದ ಅಧಿಕಾರದ ಮೇರೆಗೆ **ಡಾ॥ ಜಿ.ಸಿ.ಪ್ರಕಾಶ್, ಭಾ.ಆ.ಸೇ.,** ಜಿಲ್ಲಾಧಿಕಾರಿ, ಬೆಂಗಳೂರು ನಗರ ಜಿಲ್ಲೆ ಆದ ನಾನು, ಸದರಿ ಚುನಾವಣೆಗೆ ಸಂಬಂಧಿಸಿದ ಈ ಕೆಳಕಂಡ ಕಾರ್ಯಕ್ರಮ ವೇಳಾಪಟ್ಟಿಯನ್ನು ಈ ಮೂಲಕ ನಿಗದಿಪಡಿಸುತ್ತೇನೆ.

**ಚುನಾವಣಾ ವೇಳಾಪಟ್ಟಿ**

| | | |
|---|---|---|
| ಎ) | ನಾಮಪತ್ರಗಳನ್ನು ಸಲ್ಲಿಸಲು ಕೊನೆಯ ದಿನಾಂಕ ಮತ್ತು ದಿನ | ದಿನಾಂಕ: 19–02–2014 (ಬುಧವಾರ) |
| ಬಿ) | ನಾಮಪತ್ರಗಳನ್ನು ಪರಿಶೀಲಿಸುವ ದಿನಾಂಕ ಮತ್ತು ದಿನ | ದಿನಾಂಕ: 20–02–2014 (ಗುರುವಾರ) (ಬೆಳಿಗ್ಗೆ 11.00 ಗಂಟೆಗೆ) |
| ಸಿ) | ಉಮೇದುವಾರಿಕೆಗಳನ್ನು ಹಿಂತೆಗೆದುಕೊಳ್ಳಲು ಕೊನೆಯ ದಿನಾಂಕ ಮತ್ತು ದಿನ | ದಿನಾಂಕ: 22–02–2014 (ಶನಿವಾರ) (ಮಧ್ಯಾಹ್ನ 3.00 ಗಂಟೆವರೆಗೆ) |
| ಡಿ) | ಮತದಾನದ ಅವಶ್ಯವಿದ್ದರೆ, ಮತದಾನವನ್ನು ನಡೆಸಬೇಕಾದ ದಿನಾಂಕ ಮತ್ತು ದಿನ (ಮತದಾನದ ಸಮಯ ಬೆಳಿಗ್ಗೆ 7.00 ಗಂಟೆಯಿಂದ ಸಾಯಂಕಾಲ 5.00 ಗಂಟೆಯವರೆಗೆ) | ದಿನಾಂಕ: 02–03–2014 (ಭಾನುವಾರ) |
| ಇ) | ಮರು ಮತದಾನ ಅವಶ್ಯವಿದ್ದರೆ, ಮರು ಮತದಾನವನ್ನು ನಡೆಸಬೇಕಾದ ದಿನಾಂಕ ಮತ್ತು ದಿನ (ಮತದಾನದ ಸಮಯ ಬೆಳಿಗ್ಗೆ 7.00 ಗಂಟೆಯಿಂದ ಸಾಯಂಕಾಲ 5.00 ಗಂಟೆಯವರೆಗೆ) | ದಿನಾಂಕ: 04–03–2014 (ಮಂಗಳವಾರ) |
| ಎಫ್) | ಮತಗಳ ಎಣಿಕೆ ಬೆಳಿಗ್ಗೆ 8.00 ಗಂಟೆಯಿಂದ (ತಾಲ್ಲೂಕಿನ ಕೇಂದ್ರ ಸ್ಥಳದಲ್ಲಿ) | ದಿನಾಂಕ: 05–03–2014 (ಬುಧವಾರ) |
| ಜಿ) | ಚುನಾವಣೆಯನ್ನು ಯಾವ ದಿನಾಂಕಕ್ಕೆ ಮುಂಚೆ ಮುಕ್ತಾಯಗೊಳಿಸಬೇಕೋ ಆ ದಿನಾಂಕ ಮತ್ತು ದಿನ | ದಿನಾಂಕ: 05–03–2014 (ಬುಧವಾರ) |

**ತಃಖ್ತೆ**

**ಜಿಲ್ಲಾಧಿಕಾರಿಗಳ ಕಾರ್ಯಾಲಯ, ಬೆಂಗಳೂರು ನಗರ ಜಿಲ್ಲೆ, ಬೆಂಗಳೂರು**

**ಸಂಖ್ಯೆ: ಚುನಾ(ತಾ.ಪಂ)(ಉ.ಚು)ಸಿಆರ್:01:2013–14, ದಿನಾಂಕ: 12–02–2014.**

ಬೆಂಗಳೂರು ಜಿಲ್ಲೆಯ ಉತ್ತರ ತಾಲ್ಲೂಕು ಪಂಚಾಯಿತಿಯಲ್ಲಿ ರಾಜೀನಾಮೆಯಿಂದ ತೆರವಾಗಿರುವ ತಾಲ್ಲೂಕು ಪಂಚಾಯಿತಿಯ ಸದಸ್ಯ ಸ್ಥಾನಕ್ಕೆ ಉಪ–ಚುನಾವಣೆಯನ್ನು ನಡೆಸಲು ವೇಳಾಪಟ್ಟಿಯನ್ನು ನಿಗದಿಪಡಿಸಿದೆ.

| ಕ್ರ. ಸಂ. | ತಾಲ್ಲೂಕಿನ ಹೆಸರು | ತಾಲ್ಲೂಕು ಪಂಚಾಯಿತಿಯ ಹೆಸರು | ಪ್ರಾದೇಶಿಕ ಚುನಾವಣಾ ಕ್ಷೇತ್ರದ ಸಂಖ್ಯೆ ಮತ್ತು ಹೆಸರು | ಸ್ಥಾನಗಳ ಸಂಖ್ಯೆ | ಸದಸ್ಯ ಸ್ಥಾನ ತೆರವಾಗಲು ಕಾರಣ | ಮೀಸಲಾತಿ ವಿವರ |
|---|---|---|---|---|---|---|
| 1 | 2 | 3 | 4 | 5 | 6 | 7 |
| 1 | ಬೆಂ.ಉತ್ತರ | ಬೆಂಗಳೂರು ಉತ್ತರ ತಾಲ್ಲೂಕು ಪಂಚಾಯಿತಿ | 01–ಕೊಡಿಗೇಹಳ್ಳಿ | 01 | ಶ್ರೀಮತಿ.ಎಂ.ಎಸ್.ಪವಿತ್ರ ರವರ ರಾಜೀನಾಮೆಯಿಂದ | ಸಾಮಾನ್ಯ [ಮಹಿಳೆ] |

**ಡಾ॥ ಜಿ.ಸಿ.ಪ್ರಕಾಶ್**
ಜಿಲ್ಲಾಧಿಕಾರಿಗಳು
ಹಾಗೂ ಜಿಲ್ಲಾ ಚುನಾವಣಾಧಿಕಾರಿಗಳು
ಬೆಂಗಳೂರು ಜಿಲ್ಲೆ, ಬೆಂಗಳೂರು

# ವಿಶೇಷ ರಾಜ್ಯ ಪತ್ರಿಕೆ



| ಭಾಗ – IV-A | ಬೆಂಗಳೂರು, ಬುಧವಾರ, ಫೆಬ್ರವರಿ ೧೨, ೨೦೧೪ (ಮಾಘ ೨೩, ಶಕ ವರ್ಷ ೧೯೩೫) | ನಂ. ೧೧೫ |
|---|---|---|
| **Part – IV-A** | **Bangalore, Wednesday, February 12, 2014 (Magha 23, Shaka Varsha 1935)** | **No. 115** |



## ಸಂಸದೀಯ ವ್ಯವಹಾರಗಳು ಮತ್ತು ಶಾಸನ ರಚನಾ ಸಚಿವಾಲಯ

**ಅಧಿಸೂಚನೆ**

**ಸಂಖ್ಯೆ: ಸಂವ್ಯಶಾಇ 60 ಶಾಸನ 2013, ಬೆಂಗಳೂರು, ದಿನಾಂಕ: 12.02.2014**

ಕರ್ನಾಟಕ ಖಾಸಗಿ ಅನುದಾನಿತ ಶೈಕ್ಷಣಿಕ ಸಂಸ್ಥೆಗಳ ಸಿಬ್ಬಂದಿಗಳ (ವೇತನ, ನಿವೃತ್ತಿ ವೇತನ ಮತ್ತು ಇತರೆ ಸೌಲಭ್ಯಗಳ ನಿಯಂತ್ರಣ) ವಿಧೇಯಕ, 2014ಕ್ಕೆ 2014ರ ಫೆಬ್ರವರಿ ತಿಂಗಳ ಹನ್ನೊಂದನೇ ದಿನಾಂಕದಂದು ಘನತೆವೆತ್ತ ರಾಜ್ಯಪಾಲರ ಒಪ್ಪಿಗೆ ದೊರೆತಿದ್ದು, ಸಾಮಾನ್ಯ ತಿಳುವಳಿಕೆಗಾಗಿ ಇದನ್ನು 2014ರ ಕರ್ನಾಟಕ ಅಧಿನಿಯಮ ಸಂಖ್ಯೆ:07 ಎಂಬುದಾಗಿ ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟಿಸಬೇಕೆಂದು ಆದೇಶಿಸಲಾಗಿದೆ.

**2014ರ ಕರ್ನಾಟಕ ಅಧಿನಿಯಮ ಸಂಖ್ಯೆ 07**

(2014ರ ಫೆಬ್ರವರಿ ತಿಂಗಳ ಹನ್ನೆರಡನೇ ದಿನಾಂಕದಂದು ಕರ್ನಾಟಕ ರಾಜ್ಯ ಪತ್ರದ ವಿಶೇಷ ಸಂಚಿಕೆಯಲ್ಲಿ ಮೊದಲು ಪ್ರಕಟವಾಗಿದೆ)

## ಕರ್ನಾಟಕ ಖಾಸಗಿ ಅನುದಾನಿತ ಶೈಕ್ಷಣಿಕ ಸಂಸ್ಥೆಗಳ ಸಿಬ್ಬಂದಿಗಳ (ವೇತನ, ನಿವೃತ್ತಿ ವೇತನ ಮತ್ತು ಇತರ ಸೌಲಭ್ಯಗಳ ನಿಯಂತ್ರಣ) ಅಧಿನಿಯಮ, 2014

(2014ರ ಫೆಬ್ರವರಿ ತಿಂಗಳ ಹನ್ನೊಂದನೇ ದಿನಾಂಕದಂದು ರಾಜ್ಯಪಾಲರಿಂದ ಅನುಮತಿಯನ್ನು ಪಡೆಯಲಾಗಿದೆ)

ಸಹಾಯಾನುದಾನಕ್ಕೆ ಒಳಪಡುವ ಖಾಸಗಿ ಶೈಕ್ಷಣಿಕ ಸಂಸ್ಥೆಗಳ ಬೋಧಕ ಮತ್ತು ಬೋಧಕೇತರ ಸಿಬ್ಬಂದಿಯ ವೇತನ ಮತ್ತು ಭತ್ಯೆ ಹಾಗೂ ಇತರ ಸೇವಾಷರತ್ತುಗಳನ್ನು ನಿಯಂತ್ರಿಸಲು ಹಾಗೂ ರಾಜ್ಯದ ಆರ್ಥಿಕ ಹೊಣೆಗಾರಿಕೆಯನ್ನು ಮಿತಿಗೊಳಿಸಲು ಮತ್ತು ಅದಕ್ಕೆ ಸಂಬಂಧಿಸಿದ ಹಾಗೂ ಅದಕ್ಕೆ ಪ್ರಾಸಂಗಿಕವಾದ ಇತರ ವಿಷಯಗಳಿಗಾಗಿ ಒಂದು ಅಧಿನಿಯಮ.

ಶಿಕ್ಷಣದ ಗುಣಮಟ್ಟವನ್ನು ಸುಧಾರಿಸಲು ಮತ್ತು ವ್ಯವಸ್ಥಾಪನೆಗಳ ಹೊರೆಯನ್ನು ಕಡಿಮೆ ಮಾಡಲು ಬೋಧಕ ಮತ್ತು ಬೋಧಕೇತರ ಸಿಬ್ಬಂದಿಗೆ ವೇತನ ಅನುದಾನವನ್ನು ಮಾಡುವ ಮೂಲಕ ರಾಜ್ಯ ಸರ್ಕಾರವು ಹಲವಾರು ಖಾಸಗಿ ಶೈಕ್ಷಣಿಕ ಸಂಸ್ಥೆಗಳನ್ನು ಸಹಾಯಾನುದಾನಕ್ಕೆ ಒಳಪಡಿಸಿಕೊಂಡಿರುವುದರಿಂದ;

ಮತ್ತು, ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣದ ವ್ಯಾಪ್ತಿಯೊಳಗೆ ಬರುವ ಅನುದಾನಿತ ಸಂಸ್ಥೆಗಳ ಸಿಬ್ಬಂದಿಯ ನಿವೃತ್ತಿ ವೇತನ ಸೌಲಭ್ಯಗಳನ್ನು ನಿಯಂತ್ರಿಸಲು ಕರ್ನಾಟಕ ರಾಜ್ಯ ಅನುದಾನಿತ ಶಾಲೆಗಳ ಸಿಬ್ಬಂದಿಗಳ ವಂತಿಗೆ ಭವಿಷ್ಯನಿಧಿ – ವಿಮೆ – ನಿವೃತ್ತಿ ವೇತನ ಯೋಜನೆ (ತ್ರಿವಿಧ ಸೌಲಭ್ಯ ಯೋಜನೆ) (Triple Benefit Scheme) ನಿಯಮಗಳನ್ನು ರಾಜ್ಯ ಸರ್ಕಾರವು ದಿನಾಂಕ 24.08.1963ರ ಆದೇಶ ಸಂಖ್ಯೆ: ಇಡಿ 65 ಎಸ್ ಇ ಎಸ್ 62ನ್ನು ದಿನಾಂಕ 01.04.1963ರಿಂದ ಜಾರಿಗೆ ಬರುವಂತೆ ಹೊರಡಿಸಿದ್ದು ಒಂದು ಅಥವಾ ಒಂದಕ್ಕಿಂತ ಹೆಚ್ಚಿನ ರಾಜ್ಯ–ಅನುದಾನ ಸಂಸ್ಥೆಯಲ್ಲಿನ ತಾತ್ಕಾಲಿಕ, ಸ್ಥಾನಪನ್ನಾ ಅಥವಾ ಖಾಯಂ ಆದ ಎಲ್ಲಾ ಹಿಂದಿನ ಸೇವೆಯ ಅರ್ಹತಾದಾಯಕ ಸೇವಾವಧಿಯನ್ನು ಗಣನೆಗೆ ತೆಗೆದುಕೊಳ್ಳುವಂತೆ ನಿರ್ದೇಶಿಸಿರುವುದರಿಂದ,

ಮತ್ತು, ಸರ್ಕಾರವು, ವಿದ್ಯಾರ್ಥಿಗಳ ಬೌದ್ಧಿಕ ಮತ್ತು ದೈಹಿಕ ಸಾಮರ್ಥ್ಯಗಳ ಸಮರಸ ಬೆಳವಣಿಗೆಗೆ ಪೋಷಣೆ ನೀಡುವ ಮತ್ತು ಶಿಕ್ಷಣದ ಮೂಲಕ ವೈಜ್ಞಾನಿಕ ದೃಷ್ಟಿಕೋನವನ್ನು ಹಾಗೂ ಸರ್ವಧರ್ಮ ಸಮಭಾವವನ್ನು ಬೆಳೆಸುವ ಉದ್ದೇಶದಿಂದ ರಾಜ್ಯದಲ್ಲಿರುವ ಶಿಕ್ಷಣ ಸಂಸ್ಥೆಗಳ ಅಭಿವೃದ್ಧಿ, ಆರೋಗ್ಯಕರ ಶಿಕ್ಷಣ ಪದ್ಧತಿಗಳ ಬೋಧನೆ, ಶೈಕ್ಷಣಿಕ ಗುಣಮಟ್ಟದ ನಿರ್ವಹಣೆ ಮತ್ತು ಸುಧಾರಣೆ – ಇವುಗಳ ಬಗ್ಗೆ ಮತ್ತು ರಾಜ್ಯದಲ್ಲಿರುವ ಶಿಕ್ಷಣ ಸಂಸ್ಥೆಗಳನ್ನು ಇನ್ನಷ್ಟು ಉತ್ತಮ ರೀತಿಯಲ್ಲಿ ಸಂಘಟಿಸುವ, ಶಿಸ್ತಿಗೆ ಹಾಗೂ ನಿಯಂತ್ರಣಕ್ಕೆ ಒಳಪಡಿಸುವ ಬಗ್ಗೆ ಉಪಬಂಧಗಳನ್ನು ಕಲ್ಪಿಸಲು ಕರ್ನಾಟಕ ಶಿಕ್ಷಣ ಅಧಿನಿಯಮ, 1983ನ್ನು ರೂಪಿಸಿದ್ದು ಸದರಿ ಅಧಿನಿಯಮವು ದಿನಾಂಕ 30.05.1995ರ ಸರ್ಕಾರಿ ಅಧಿಸೂಚನೆ ಸಂಖ್ಯೆ: ಇಡಿ 2 ಎಂಇಎಸ್ 95ರ ಅನ್ವಯ 1.6.1995ರಿಂದ ಜಾರಿಗೆ ಬಂದಿದ್ದು ಅದರ 146(3)ನೇ ಪ್ರಕರಣದಲ್ಲಿ ಒಳಗೊಂಡಿರುವ ಉಳಿಸುವಿಕೆ ಖಂಡದ ಕಾರಣದಿಂದಾಗಿ ತ್ರಿವಿಧ ಸೌಲಭ್ಯ ಯೋಜನೆ (ಟಿಬಿಎಸ್) ನಿಯಮಗಳು ಸದರಿ ಅಧಿನಿಯಮದ ಅವಿಭಾಜ್ಯ ಅಂಗವಾಗಿರುವುದರಿಂದ; ಮತ್ತು, ವೇತನಕ್ಕಾಗಿ ಅನುದಾನರಹಿತ ಸೇವೆಯನ್ನು (non-grant service)

ಪರಿಗಣಿಸದಿರುವುದನ್ನು ರಿಟ್ ಅರ್ಜಿ ಸಂಖ್ಯೆ: 226-228/1998ರಲ್ಲಿ ಪ್ರಶ್ನಿಸಲಾಗಿದ್ದು, ರಿಟ್ ಅರ್ಜಿದಾರರು ಕೋರಿದ ಪರಿಹಾರಗಳನ್ನು ತಿರಸ್ಕರಿಸುವುದರ ಮೂಲಕ 13.08.1998ರಂದು ಸದರಿ ರಿಟ್ ಅರ್ಜಿಗಳನ್ನು ವಜಾ ಮಾಡಿರುವುದರಿಂದ;

ಮತ್ತು, ಸರ್ಕಾರವು ದಿನಾಂಕ 12.07.2001ರ ಪತ್ರ ಸಂಖ್ಯೆ: ಇಡಿ 130 ಪಿಎಂಸಿ 99ರಲ್ಲಿ, ನಿವೃತ್ತಿ ವೇತನ ಸೌಲಭ್ಯಗಳಿಗಾಗಿ ಅನುದಾನರಹಿತ (Unaided) ಸೇವೆಯನ್ನು ಲೆಕ್ಕಕ್ಕೆ ತೆಗೆದುಕೊಳ್ಳಬಾರದೆಂದು ನಿರ್ದೇಶನವನ್ನು ನೀಡಿರುವುದರಿಂದ;

ಮತ್ತು, ನಿವೃತ್ತಿವೇತನ ಮತ್ತು ರಜೆಯ ಉದ್ದೇಶಗಳಿಗಾಗಿ ಅನುದಾನರಹಿತ ಸೇವೆಯನ್ನು ಪರಿಗಣಿಸತಕ್ಕದ್ದಲ್ಲವೆಂಬುದನ್ನು ಸ್ಪಷ್ಟೀಕರಿಸುವುದಕ್ಕಾಗಿ ಸರ್ಕಾರವು ಇಡಿ 90 ಪಿಎಂಸಿ 99 ಎಂಬ ಸಂಖ್ಯೆಯುಳ್ಳ ಸುತ್ತೋಲೆಯನ್ನು ದಿನಾಂಕ 20.09.2003ರಂದು ಹೊರಡಿಸಿರುವುದರಿಂದ;

ಮತ್ತು, ಅನುದಾನರಹಿತ ಅವಧಿಯಲ್ಲಿ ಸಲ್ಲಿಸಿದ ಸೇವೆಯನ್ನು ವೇತನ, ರಜೆ, ನಿವೃತ್ತಿವೇತನ ಮತ್ತು ಇತರ ಯಾವುದೇ ಸೇವಾ ಸೌಲಭ್ಯಗಳಿಗಾಗಿ ಪರಿಗಣಿಸತಕ್ಕದ್ದಲ್ಲವೆಂದು ಹೇಳಿರುವ ಕರ್ನಾಟಕ ಶೈಕ್ಷಣಿಕ ಸಂಸ್ಥೆಗಳ (ಖಾಸಗಿ ಅನುದಾನಿತ ಮತ್ತು ಪ್ರಾಥಮಿಕ ಹಾಗೂ ಪ್ರೌಢ ಶಿಕ್ಷಣ ಸಂಸ್ಥೆಗಳ ಸಿಬ್ಬಂದಿಗಳ ನೇಮಕಾತಿ ಮತ್ತು ಸೇವಾ ನಿಬಂಧನೆಗಳು ಮತ್ತು ಷರತ್ತುಗಳು) ನಿಯಮಗಳು, 1999ರ ನಿಯಮ 3 (1)(ಬಿ) ಮತ್ತು (ಸಿ) ಯಲ್ಲಿ ನೀಡಿರುವ ನಿರ್ದೇಶನಗಳನ್ನು, ಪುನರುಚ್ಚರಿಸುತ್ತಾ ಸರ್ಕಾರವು ದಿನಾಂಕ: 10.04.2006ರಂದು ಆದೇಶ ಸಂಖ್ಯೆ: ಇಡಿ 674 ಎಸ್ಇಡಬ್ಲ್ಯು 2005ನ್ನು ಹೊರಡಿಸಿರುವುದರಿಂದ;

ಮತ್ತು, ಶ್ರೀ ಎಚ್. ಪೀಟರ್ ರವರು ರಿಟ್ ಅರ್ಜಿ ಸಂಖ್ಯೆ: 10399/2004 ರಲ್ಲಿ ನಿವೃತ್ತಿ ವೇತನಗಳಿಗಾಗಿ ಅನುದಾನರಹಿತ ಸೇವಾವಧಿಯನ್ನು ಲೆಕ್ಕಕ್ಕೆ ತೆಗೆದುಕೊಳ್ಳದಿರುವುದನ್ನು ಪ್ರಶ್ನಿಸಿದ್ದು, ಕರ್ನಾಟಕದ ಮಾನ್ಯ ಉಚ್ಚನ್ಯಾಯಾಲಯವು ನಿವೃತ್ತಿವೇತನ ಸೌಲಭ್ಯಗಳನ್ನು ಲೆಕ್ಕ ಮಾಡುವಾಗ ಅನುದಾನರಹಿತ ಅವಧಿಯನ್ನು ಪರಿಗಣಿಸತಕ್ಕದ್ದೆಂದು ನಿರ್ದೇಶಿಸಿ ಸದರಿ ರಿಟ್ ಅರ್ಜಿಯನ್ನು 01.09.2006ರಂದು ಪುರಸ್ಕರಿಸಿರುವುದರಿಂದ;

ಮತ್ತು, ಕರ್ನಾಟಕ ಶಿಕ್ಷಣ ಅಧಿನಿಯಮ, 1983ರ 145ನೇ ಪ್ರಕರಣದ (1)ನೇ ಉಪ ಪ್ರಕರಣದ ಮೂಲಕ ಪ್ರದತ್ತವಾದ ಅಧಿಕಾರಗಳನ್ನು ಚಲಾಯಿಸಿ ಸರ್ಕಾರವು, ಕರ್ನಾಟಕ ಪದವಿ ಪೂರ್ವ ಶಿಕ್ಷಣ (ಶೈಕ್ಷಣಿಕ, ನೋಂದಣಿ, ಆಡಳಿತ ಮತ್ತು ಸಹಾಯಾನುದಾನ ಇತ್ಯಾದಿ)ನಿಯಮಗಳು, 2006ನ್ನು ರೂಪಿಸಿದೆ. ಸದರಿ ನಿಯಮಗಳ 21ನೇ ನಿಯಮದ (2) ಮತ್ತು (3)ನೇ ಉಪ ನಿಯಮಗಳು ಈ ಕೆಳಗಿನಂತೆ ಇರುವುದರಿಂದ, ಎಂದರೆ:-

"(2) ಖಾಸಗಿ ಅನುದಾನಿತ ಪದವಿ-ಪೂರ್ವ ಕಾಲೇಜುಗಳಲ್ಲಿ ಅಂಥ ಹುದ್ದೆಗಳಲ್ಲಿ ಕಾರ್ಯನಿರ್ವಹಿಸುತ್ತಿರುವ ಹುದ್ದೆಗಳು ಮತ್ತು ವ್ಯಕ್ತಿಗಳು, ಸರ್ಕಾರವು ಸಹಾಯಾನುದಾನವನ್ನು ಮಂಜೂರು ಮಾಡಿದ ದಿನಾಂಕದಿಂದ ಮಾತ್ರವೇ ಸಹಾಯಾನುದಾನಕ್ಕೆ ಅರ್ಹರಾಗಿರತಕ್ಕದ್ದು ಮತ್ತು ಅನುದಾನರಹಿತ ಸೇವೆಯ ಹಿಂದಿನ ಅವಧಿಯನ್ನು ನಿವೃತ್ತಿ ವೇತನವು ಒಳಗೊಂಡಂತೆ ಯಾವುದೇ ವೇತನ ನಿಗದಿ, ವೇತನ ಬಡ್ತಿ, ರಜೆ, ಜ್ಯೇಷ್ಠತೆ ಮತ್ತು ಇತರ ಸೇವಾ ಸೌಲಭ್ಯಗಳಿಗಾಗಿ ಲೆಕ್ಕಕ್ಕೆ ತೆಗೆದುಕೊಳ್ಳತಕ್ಕದ್ದಲ್ಲ.

(3) ಅನುದಾನಿತ ಪದವಿಪೂರ್ವ ಕಾಲೇಜಿನ ಒಬ್ಬ ಸಿಬ್ಬಂದಿಗೆ ಸಹಾಯಾನುದಾನ ವೇತನವನ್ನು ಮಂಜೂರು ಮಾಡಿರುವ ಪರಿಣಾಮವಾಗಿ, ಅಂಥ ಒಬ್ಬ ಸಿಬ್ಬಂದಿಗೆ ಮೂಲವೇತನವನ್ನು ಆ ಹುದ್ದೆಗೆ ಅನ್ವಯವಾಗುವ ವೇತನ ಶ್ರೇಣಿಯಲ್ಲಿಯ ಕನಿಷ್ಠಕ್ಕೆ ನಿಗದಿಪಡಿಸತಕ್ಕದ್ದು ಮತ್ತು ಅನುದಾನರಹಿತ ಸೇವೆಯಲ್ಲಿನ ಮೊದಲಿನ ಅವಧಿಯ ಸಂಬಂಧದಲ್ಲಿ ಕಾಲ್ಪನಿಕವಾಗಲೀ ಅಥವಾ ಅನ್ಯಥಾ ಯಾವುದೇ ಹಣಕಾಸಿನ ಪ್ರಯೋಜನಗಳಿಗೆ ಆತನು ಅರ್ಹನಾಗಿರುವುದಿಲ್ಲ."

ಮತ್ತು, ರಿಟ್ ಅರ್ಜಿ ಸಂಖ್ಯೆ: 10399/2004ರಲ್ಲಿ ಮಾಡಲಾದ ದಿನಾಂಕ 01.09.2006ರ ಆದೇಶದ ವಿರುದ್ಧ ಕರ್ನಾಟಕ ಮಾನ್ಯ ಉಚ್ಚನ್ಯಾಯಾಲಯದ ವಿಭಾಗ ಪೀಠದ ಮುಂದೆ ರಾಜ್ಯವು ಸಲ್ಲಿಸಿದ ರಿಟ್ ಅಪೀಲು: ಸಂಖ್ಯೆ 291/2007 ತಿರಸ್ಕೃತವಾಗಿದ್ದು, ಸರ್ವೋಚ್ಚ ನ್ಯಾಯಾಲಯದ ಮುಂದೆ ರಾಜ್ಯ ಸರ್ಕಾರವು ಸಲ್ಲಿಸಿದ ವಿಶೇಷ ಅನುಮತಿ ಅರ್ಜಿಯೂ 09.05.2011ರಂದು ವಜಾಗೊಂಡಿರುವುದರಿಂದ;

ಮತ್ತು, ನಿವೃತ್ತಿ ವೇತನ ಪ್ರಯೋಜನಗಳಿಗಾಗಿ ಅನುದಾನರಹಿತ ಅವಧಿಯ ಸೇವೆಯನ್ನು ಲೆಕ್ಕಕ್ಕೆ ತೆಗೆದುಕೊಳ್ಳದಿರುವುದನ್ನು ರಿಟ್ ಅರ್ಜಿ ಸಂಖ್ಯೆ: 126/2008 ಮತ್ತು ರಿಟ್ ಅರ್ಜಿ ಸಂಖ್ಯೆ: 15025/2006ರಲ್ಲಿ ಪ್ರಶ್ನಿಸಲಾಗಿದ್ದು ಸದರಿ ರಿಟ್ ಅರ್ಜಿಗಳು ರಾಜ್ಯವು ಸಲ್ಲಿಸಿದ ರಿಟ್ ಅಪೀಲುಗಳೊಂದಿಗೆ ಸಂಬಂಧಿಸಿದವುಗಳಾಗಿದ್ದು ಸದರಿ ರಿಟ್ ಅರ್ಜಿಗಳನ್ನು 03.11.2009ರಂದು ಪುರಸ್ಕರಿಸಿರುವುದರಿಂದ;

ಮತ್ತು, ಅನುದಾನರಹಿತ ಅವಧಿಯಲ್ಲಿ ಸಲ್ಲಿಸಿದ ಸೇವೆಯನ್ನು ವೇತನ, ರಜೆ, ನಿವೃತ್ತಿವೇತನ ಮತ್ತು ಇತರ ಯಾವುದೇ ಸೇವಾ ಸೌಲಭ್ಯಗಳಿಗಾಗಿ ಪರಿಗಣಿಸತಕ್ಕದ್ದಲ್ಲವೆಂದು ಹೇಳಿರುವ ಕರ್ನಾಟಕ ಶೈಕ್ಷಣಿಕ ಸಂಸ್ಥೆಗಳ (ಖಾಸಗಿ ಅನುದಾನಿತ ಮತ್ತು ಪ್ರಾಥಮಿಕ ಹಾಗೂ ಪ್ರೌಢ ಶಿಕ್ಷಣ ಸಂಸ್ಥೆಗಳ ಸಿಬ್ಬಂದಿಗಳ ನೇಮಕಾತಿ ಮತ್ತು ಸೇವಾ ನಿಬಂಧನೆಗಳು ಮತ್ತು ಷರತ್ತುಗಳು) ನಿಯಮಗಳು, 1999ರ ನಿಯಮ 3 (1)(ಬಿ) ಮತ್ತು (ಸಿ) ಯಲ್ಲಿ ನೀಡಿರುವ ನಿರ್ದೇಶನಗಳನ್ನು, ಮತ್ತೊಮ್ಮೆ ಪುನರುಚ್ಚರಿಸುತ್ತಾ ಸರ್ಕಾರವು ದಿನಾಂಕ 13.03.2009ರ ಸುತ್ತೋಲೆ ಸಂಖ್ಯೆ ಇಡಿ 156 ಪಿಎಂಸಿ 2005ನ್ನು ಹೊರಡಿಸಿರುವುದರಿಂದ;

ಮತ್ತು, ವೇತನ ನಿಗದಿಗಾಗಿ ಅನುದಾನರಹಿತ ಅವಧಿಯು ಪರಿಗಣಿತವಲ್ಲವೆಂಬುದನ್ನು ರಿಟ್ ಅರ್ಜಿ ಸಂಖ್ಯೆ: 25447/2010ರಲ್ಲಿ ಪ್ರಶ್ನಿಸಲಾಗಿದ್ದು ದಿನಾಂಕ 16.08.2010ರಂದು ಸದರಿ ರಿಟ್ ಅರ್ಜಿಯನ್ನು ಪುರಸ್ಕರಿಸಲಾಯಿತು. ರಾಜ್ಯವು, ದಿನಾಂಕ 16.08.2010ರ ಆದೇಶದ ವಿರುದ್ಧವಾಗಿ ರಿಟ್ ಅಪೀಲು 4788/2010ನ್ನು ಸಲ್ಲಿಸಿದ್ದು ಸದರಿ ರಿಟ್ ಅಪೀಲನ್ನು ಮಾನ್ಯ ಉಚ್ಚನ್ಯಾಯಾಲಯದ ವಿಭಾಗ ಪೀಠವು ವಜಾಮಾಡಿತು ಮತ್ತು ವಿಶೇಷ ಅನುಮತಿ ಅರ್ಜಿ (ಎಸ್ಎಲ್ಪಿ) (ಸಿಸಿ) ಸಂಖ್ಯೆ 7365/2012ನ್ನೂ 02.07.2012ರಂದು ವಜಾಮಾಡಿತು. ವಿಶೇಷ ಅನುಮತಿ ಅರ್ಜಿ (ಸಿಸಿ) ಸಂಖ್ಯೆ: 7365/2012ರಲ್ಲಿ ಹೊರಡಿಸಿದ ಆದೇಶದ ವಿರುದ್ಧ ರಾಜ್ಯವು ಸಲ್ಲಿಸಿದ ಪುನರಾವಲೋಕನ ಅರ್ಜಿ ಸಂಖ್ಯೆ: 2364/2012 ಕೂಡಾ 06.12.2012ರಂದು ವಜಾಗೊಂಡಿದ್ದು, ತತ್ಪರಿಣಾಮವಾಗಿ, ಕರ್ನಾಟಕ ಪದವಿ-ಪೂರ್ವ ಶಿಕ್ಷಣ (ಶೈಕ್ಷಣಿಕ, ನೋಂದಣಿ, ಆಡಳಿತ ಮತ್ತು ಸಹಾಯಾನುದಾನ ಇತ್ಯಾದಿ) ನಿಯಮಗಳು, 2006ರ ನಿಯಮ 21(2) ಮತ್ತು (3) ರಲ್ಲಿ ನೀಡಲಾದ ನಿರ್ದೇಶನಗಳ ವಿರುದ್ಧವಾಗಿ ರಿಟ್ ಅರ್ಜಿ ಸಂಖ್ಯೆ: 25447/2010ರಲ್ಲಿ ಕರ್ನಾಟಕದ ಮಾನ್ಯ ಉಚ್ಚನ್ಯಾಯಾಲಯದ ಆದೇಶಗಳನ್ನು ಪಾಲಿಸಬೇಕಾದ ಅನಿವಾರ್ಯ ಪರಿಸ್ಥಿತಿಯು ಬಂದೊದಗಿರುವುದರಿಂದ;

ಮತ್ತು, ದಿನಾಂಕ:03.11.2009ರ ಆದೇಶವನ್ನು ಪ್ರಶ್ನಿಸಿ ಭಾರತದ ಮಾನ್ಯ ಸರ್ವೋಚ್ಚನ್ಯಾಯಾಲಯದಲ್ಲಿ ರಾಜ್ಯ ಸರ್ಕಾರವು ಸಲ್ಲಿಸಿರುವ ವಿಶೇಷ ಅನುಮತಿ ಅರ್ಜಿ(ಎಸ್ಎಲ್ಪಿ) ಸಂಖ್ಯೆ: 22176-22186/10 ಇದು ರಾಜ್ಯವು ಸಲ್ಲಿಸಿರುವ ಇತರ ಎಸ್ಎಲ್ಪಿಗಳೊಂದಿಗೆ ಸಂಬಂಧಿಸಿದವುಗಳಾಗಿದ್ದು ಸದರಿ ಎಸ್ಪಿಲ್ಪಿಗಳೂ ದಿನಾಂಕ 21.08.2013ರಂದು ವಜಾಗೊಂಡಿರುವುದರಿಂದ;

ಮತ್ತು, ಸರ್ಕಾರವು, ದಿನಾಂಕ:18.08.1976ರ ಆದೇಶ ಸಂಖ್ಯೆ: ಇಡಿ 176 ಯುಪಿಸಿ 75ರಲ್ಲಿ, 01.04.1970ರಿಂದ ಜಾರಿಗೆ ಬರುವಂತೆ ಉನ್ನತ ಶಿಕ್ಷಣದ ವ್ಯಾಪ್ತಿಯೊಳಗೆ ಬರುವ ಅನುದಾನಿತ ಸಂಸ್ಥೆಗಳಲ್ಲಿನ ಸಿಬ್ಬಂದಿಗಳಿಗೆ ನಿವೃತ್ತಿ ವೇತನ ಸೌಲಭ್ಯಗಳನ್ನು ನಿಯಂತ್ರಿಸಲು, ಕರ್ನಾಟಕ ರಾಜ್ಯ ಅನುದಾನಿತ ಕಾಲೇಜು ಮತ್ತು ತಾಂತ್ರಿಕ ಸಂಸ್ಥೆಗಳ ಸಿಬ್ಬಂದಿಗಳ ತ್ರಿವಿಧ ಸೌಲಭ್ಯ ಯೋಜನೆ (ನಿವೃತ್ತಿ ವೇತನ, ವಿಮೆ ಮತ್ತು ವ್ಯವಸ್ಥಾಪನಾ ವಂತಿಗೆ) ನಿಯಮಗಳು, 1976ನ್ನು (ಸಂಕ್ಷಿಪ್ತವಾಗಿ ಟಿಬಿಎಸ್ ನಿಯಮಗಳು ಎನ್ನುವರು) ಹೊರಡಿಸಿದ್ದು, ಅದು ಟಿಬಿಎಸ್ ನಿಯಮಗಳ ನಿಯಂತ್ರಣಕ್ಕೊಳಪಡುವ ಸಹಾಯಾನುದಾನಿತ ಸಂಸ್ಥೆಗಳಲ್ಲಿ ಕ್ರಮಬದ್ಧವಾಗಿ ಮತ್ತು ಪೂರ್ಣಕಾಲಿಕ ಹುದ್ದೆಗಳಲ್ಲಿ ಸಲ್ಲಿಸಿದ ಹಿಂದಿನ ಎಲ್ಲಾ ಸೇವೆಯನ್ನು, ಅರ್ಹತಾದಾಯಕ ಸೇವಾವಧಿಯನ್ನು ಲೆಕ್ಕ ಹಾಕುವುದಕ್ಕಾಗಿ ಪರಿಗಣಿಸತಕ್ಕದ್ದೆಂದು ನಿರ್ದೇಶನ ನೀಡಿರುವುದರಿಂದ;

ಮತ್ತು, ಸರ್ಕಾರವು, ದಿನಾಂಕ 05.04.1991ರ ಸರ್ಕಾರಿ ಆದೇಶ ಸಂಖ್ಯೆ ಇಡಿ 15 ಯುಇಸಿ 89ರಲ್ಲಿ, ಪ್ರಥಮ ದರ್ಜೆ (ಪದವಿ)ಯಲ್ಲಿನ, ಎಂದರೆ, ಸರ್ಕಾರಿ ಕಾಲೇಜುಗಳ ಮತ್ತು 01.01.1986ರಿಂದ ಜಾರಿಗೆ ಬರುವಂತೆ ಕಾಲೇಜು ಶಿಕ್ಷಣ ಇಲಾಖೆಯ ಅಡಿಯಲ್ಲಿ ಸಹಾಯಾನುದಾನ ಸಂಹಿತೆಯ ಅನ್ವಯ ಸರ್ಕಾರದ ಅನುದಾನಿತ ಕಾಲೇಜುಗಳ ಗ್ರಂಥಪಾಲರು ಮತ್ತು ದೈಹಿಕ ಶಿಕ್ಷಣ ಸಿಬ್ಬಂದಿಗಳಿಗೆ ಪರಿಷ್ಕೃತ 1986ರ ವಿಶ್ವವಿದ್ಯಾಲಯ ಅನುದಾನಗಳ ಆಯೋಗ ವೇತನ ಶ್ರೇಣಿಗಳನ್ನು ಮಂಜೂರು ಮಾಡಿದ್ದು ಇತರ ವಿಷಯಗಳ ಜೊತೆಗೆ ನೌಕರಿ ಮುಂಬಡ್ತಿ ಯೋಜನೆಯನ್ನು (Career Advancement Scheme) ಅನುದಾನಿತ ಕಾಲೇಜುಗಳ ಗ್ರಂಥಪಾಲರು ಮತ್ತು ದೈಹಿಕ ಶಿಕ್ಷಣ ಸಿಬ್ಬಂದಿಗಳಿಗೆ ವಿಸ್ತರಿಸಿರುವುದರಿಂದ;

ಮತ್ತು, ಕರ್ನಾಟಕ ಶಿಕ್ಷಣ ಅಧಿನಿಯಮ, 1983ರ 145ನೇ ಪ್ರಕರಣದ (1)ನೇ ಉಪಪ್ರಕರಣದ ಮೂಲಕ ಪ್ರದತ್ತವಾದ ಅಧಿಕಾರಗಳನ್ನು ಚಲಾಯಿಸಿ, ಸರ್ಕಾರವು, ಕರ್ನಾಟಕ ಶೈಕ್ಷಣಿಕ ಸಂಸ್ಥೆಗಳ (ಅನುದಾನಿತ ಶಿಕ್ಷಣದ ಕಾಲೇಜುಗಳು ಮತ್ತು ಶಿಕ್ಷಕರ ತರಬೇತಿ ಸಂಸ್ಥೆಗಳ ಸಿಬ್ಬಂದಿಗಳ ನೇಮಕಾತಿ ಮತ್ತು ಸೇವಾ ನಿಬಂಧನೆಗಳು ಮತ್ತು ಷರತ್ತುಗಳು) ನಿಯಮಗಳು, 2001 ಎನ್ನುವ ನಿಯಮಗಳನ್ನು ಹೊರಡಿಸಿದೆ. ಸದರಿ ನಿಯಮಗಳ ನಿಯಮ 3(1)(ಬಿ) ಮತ್ತು 3(1) (ಸಿ)ಯ ಪರಂತುಕದಲ್ಲಿ, ವೇತನ, ರಜೆ, ನಿವೃತ್ತಿ ವೇತನ ಮತ್ತು ಯಾವುದೇ ಇತರ ಸೇವಾ ಸೌಲಭ್ಯಗಳಿಗಾಗಿ, ಅನುದಾನರಹಿತ ಅವಧಿಯಲ್ಲಿ ಸಲ್ಲಿಸಿದ ಸೇವೆಯನ್ನು ಪರಿಗಣಿಸತಕ್ಕದ್ದಲ್ಲವೆಂದು ನಿರ್ದೇಶನವನ್ನು ನೀಡಿರುವುದರಿಂದ;

ಮತ್ತು, ಸಕ್ಷಮ ಪ್ರಾಧಿಕಾರಗಳು/ನಿಕಾಯಗಳು ಹೊರಡಿಸಿದ ಮಾರ್ಗಸೂಚಿಗಳಲ್ಲಿ ನಿರ್ದಿಷ್ಟಪಡಿಸಿದ ಷರತ್ತುಗಳನ್ನು ಪೂರೈಸುವುದಕ್ಕೆ ಒಳಪಟ್ಟು ಸ್ವಯಂ ಚಾಲಿತ ಮುಂಬಡ್ತಿ ಯೋಜನೆ (Automatic Advancement Scheme) ಮತ್ತು ನೌಕರಿ ಮುಂಬಡ್ತಿ ಯೋಜನೆಗಾಗಿ ಅನುದಾನರಹಿತ ಅವಧಿಯ ಸೇವೆಯನ್ನು ಲೆಕ್ಕಹಾಕುವ ಉದ್ದೇಶದಿಂದ ಹೊರಡಿಸಲಾದ ದಿನಾಂಕ 03.06.2003ರ ಸರ್ಕಾರಿ ಆದೇಶ ಸಂಖ್ಯೆ: ಇಡಿ 25 ಯುಪಿಸಿ 2001ರಲ್ಲಿ ನೀಡಲಾದ ನಿರ್ದೇಶನಗಳ ಒಂದು ಅನುದ್ದೇಶಿತ ಅರ್ಥವಿವರಣೆಯ ಮೂಲಕ ಸ್ವಯಂ ಚಾಲಿತ ಮುಂಬಡ್ತಿ ಯೋಜನೆ ಮತ್ತು ನೌಕರಿ ಮುಂಬಡ್ತಿ ಯೋಜನೆಯ ಉದ್ದೇಶಕ್ಕಾಗಿ, ಸಹಾಯಾನುದಾನಕ್ಕೆ ಒಳಪಡುವ ದಿನಾಂಕಕ್ಕೆ ಮೊದಲು ಖಾಸಗಿ ಕಾಲೇಜುಗಳ ಮತ್ತು ತಾಂತ್ರಿಕ ಸಂಸ್ಥೆಗಳ ಸಿಬ್ಬಂದಿಯು ಸಲ್ಲಿಸಿದ ಸೇವೆಯನ್ನು ಸಹ ಪರಿಗಣನೆಗೆ ತೆಗೆದುಕೊಂಡಿರುವುದರಿಂದ;

ಮತ್ತು ಸ್ವಯಂ ಚಾಲಿತ ಮುಂಬಡ್ತಿ ಯೋಜನೆ, ನೌಕರಿ ಮುಂಬಡ್ತಿ ಯೋಜನೆ ಮತ್ತು ನಿವೃತ್ತಿ ವೇತನಕ್ಕಾಗಿ ಅನುದಾನರಹಿತ ಅವಧಿಯ ಸೇವೆಯನ್ನು ಲೆಕ್ಕ ಹಾಕದಿರುವುದನ್ನು ರಿಟ್ ಅರ್ಜಿ ಸಂಖ್ಯೆಗಳು: 14676/2001, 871/2004, 19431/2005 ಮತ್ತು 5145/2007 ಇವುಗಳಲ್ಲಿ ಕೆಲವು ಅನುದಾನಿತ ಸಿಬ್ಬಂದಿಗಳು ಕರ್ನಾಟಕದ ಮಾನ್ಯ ಉಚ್ಚ ನ್ಯಾಯಾಲಯದಲ್ಲಿ ಪ್ರಶ್ನಿಸಿದ್ದು ತ್ರಿವಿಧ ಸೌಲಭ್ಯ ಯೋಜನೆ (Triple Benefit Scheme) ನಿಯಮಗಳು ಮತ್ತು ಸರ್ಕಾರಿ ಆದೇಶಗಳು, ಕರ್ನಾಟಕ ಶಿಕ್ಷಣ ಅಧಿನಿಯಮ, 1983ರ 87ನೇ ಪ್ರಕರಣಕ್ಕೆ ಅನುಗುಣವಾಗಿಲ್ಲವೆಂದು, ಅದಕ್ಕಾಗಿ, ಟಿಬಿಎಸ್ ನಿಯಮಗಳ ಅನುಸಾರವಾಗಿ, ಅನುದಾನಿತ ಸಂಸ್ಥೆಗಳಲ್ಲಿ ಸಲ್ಲಿಸಿದ ಸೇವೆಯನ್ನು ಮಾತ್ರವೇ ಅರ್ಹತಾ ಸೇವೆಗಾಗಿ ಪರಿಗಣಿಸುವ ಸರ್ಕಾರದ ವಾದವನ್ನು ತಿರಸ್ಕರಿಸುವ ಮೂಲಕ, ಮಾನ್ಯ ಉಚ್ಚ ನ್ಯಾಯಾಲಯವು ಅನುದಾನರಹಿತ ಅವಧಿಗಾಗಿ ವೇತನ ಬಡ್ತಿಗಳು ಮತ್ತು ಬಡ್ತಿಗಳನ್ನು ಒಳಗೊಂಡಂತೆ, ಪಡೆದ ವಾಸ್ತವಿಕ ಉಪಲಬ್ಧಿಗಳ ಆಧಾರದ ಮೇಲೆ ಪ್ರಾರಂಭದ ನೇಮಕಾತಿಯಿಂದ ಸೇವೆಯನ್ನು ಲೆಕ್ಕಹಾಕಬೇಕೆಂಬ ನಿರ್ದೇಶನವನ್ನು ನೀಡುವ ಮೂಲಕ 13.10.2006 ಮತ್ತು 12.12.2007ರಂದು ರಿಟ್ ಅರ್ಜಿಗಳನ್ನು ಪುರಸ್ಕರಿಸಿರುವುದರಿಂದ;

ಮತ್ತು, ರಿಟ್ ಅರ್ಜಿ ಸಂಖ್ಯೆಗಳು 14676/2001, 871/2004, 19431/2005 ಮತ್ತು 5145/2007ರಲ್ಲಿ ಮಾಡಲಾದ ದಿನಾಂಕ 13.10.2006 ಮತ್ತು 12.12.2007ರ ಆದೇಶಗಳಿಗೆ ವಿರುದ್ಧವಾಗಿ ಸರ್ಕಾರವು ಅಪೀಲುಗಳನ್ನು ಸಲ್ಲಿಸಿದ್ದು, ದಿನಾಂಕ 03.11.2009ರಂದು ಕರ್ನಾಟಕ ಮಾನ್ಯ ಉಚ್ಚ ನ್ಯಾಯಾಲಯವು, ರಾಜ್ಯ ಸರ್ಕಾರವು ಸಲ್ಲಿಸಿದ ರಿಟ್ ಅಪೀಲು ಸಂಖ್ಯೆ: 450/2007, 848/2008 ಇವುಗಳನ್ನು ಅಂತಹುದೇ ಇತರ ರಿಟ್ ಅರ್ಜಿಗಳೊಂದಿಗೆ ಜೋಡಿಸಿ ಈ ಮುಂದಿನ ಆದೇಶವನ್ನು ಹೊರಡಿಸಿರುವುದರಿಂದ, ಎಂದರೆ:–

"ಈ ಸನ್ನಿವೇಶಗಳ ಹಿನ್ನೆಲೆಯಲ್ಲಿ, ರಾಜ್ಯವು ಸಲ್ಲಿಸಿದ ರಿಟ್ ಅಪೀಲುಗಳನ್ನು ವಜಾಮಾಡತಕ್ಕದ್ದು ಮತ್ತು ರಿಟ್ ಅರ್ಜಿಗಳನ್ನು ಪುರಸ್ಕರಿಸತಕ್ಕದ್ದು. ಸಮಗ್ರ (ಆಬ್ಸಲ್ಯೂಟ್) ನಿಯಮವನ್ನು ಮಾಡಲಾಗಿದೆ. ಈ ಆದೇಶದ ಪ್ರಮಾಣೀಕೃತ ಪ್ರತಿಯನ್ನು ಸ್ವೀಕರಿಸಿದ ದಿನಾಂಕದಿಂದ ಎರಡು ತಿಂಗಳುಗಳ ಅವಧಿಯೊಳಗೆ ಪ್ರತಿಯೊಬ್ಬ ಉಪನ್ಯಾಸಕರು/ಶಿಕ್ಷಕರು ರಿಟ್ ಅರ್ಜಿಗಳನ್ನು ಸಲ್ಲಿಸಿದ ದಿನಾಂಕದಿಂದ ಜಾರಿಗೆ ಬರುವಂತೆ ಪಾವತಿಸತಕ್ಕ ಪ್ರತಿವರ್ಷಕ್ಕೆ ಶೇಕಡಾ 6ರ ದರದಲ್ಲಿ ಬಡ್ಡಿಯೊಂದಿಗೆ ನಿವೃತ್ತಿವೇತನ ಮತ್ತು ಉಪದಾನವನ್ನೂ ಒಳಗೊಂಡಂತೆ ಅವರ ನಿವೃತ್ತಿ ಸೌಲಭ್ಯಗಳಿಗೆ ಸಂಬಂಧಿಸಿದಂತೆ ಅವರುಗಳಿಗೆ ಅನ್ವಯವಾಗುವ ಸಂಬಂಧಪಟ್ಟ ನಿಯಮಗಳಿಗೆ ಅನುಸಾರವಾಗಿ ಆದೇಶಗಳನ್ನು ಹೊರಡಿಸತಕ್ಕದ್ದು ಹಾಗೂ ಪ್ರತಿಯೊಬ್ಬ ಅರ್ಜಿದಾರನ ಪ್ರಕರಣವನ್ನು ಪರಿಶೀಲಿಸತಕ್ಕದ್ದು ಎಂದು ಸಂಬಂಧಪಟ್ಟ ಪ್ರಾಧಿಕಾರಿಗಳಿಗೆ ನಿರ್ದೇಶನ ನೀಡಲಾಗಿದೆ."

ಮತ್ತು, ವಿಶೇಷ ಅನುಮತಿ ಅರ್ಜಿ (ಎಸ್‌ಎಲ್‌ಪಿ) ಸಂಖ್ಯೆ: 22176–22186/2010ರಲ್ಲಿ ಕರ್ನಾಟಕ ರಾಜ್ಯವು ಮಾನ್ಯ ಸರ್ವೋಚ್ಚ ನ್ಯಾಯಾಲಯದಲ್ಲಿ ಹೂಡಿದ ಅಪೀಲನ್ನು ಇತರ ಅಂತಹುದೇ ವಿಶೇಷ ಅನುಮತಿ ಅರ್ಜಿಗಳಿಗೆ ಜೋಡಣೆ ಮಾಡಿದ್ದು ಅವುಗಳನ್ನು 21.08.2013ರಂದು ವಜಾಮಾಡಲಾಗಿರುವುದರಿಂದ;

ಮತ್ತು, ತರುವಾಯದಲ್ಲಿ ಸಹಾಯಾನುದಾನದ ಅಡಿಯಲ್ಲಿ ತರಲಾದ ಅನುದಾನರಹಿತ ಸಂಸ್ಥೆಗಳಲ್ಲಿ ಸಲ್ಲಿಸಿದ ಸೇವೆಯನ್ನು ನಿವೃತ್ತಿ ಸೌಲಭ್ಯಗಳ ಉದ್ದೇಶಕ್ಕಾಗಿ ಸೇರಿಸಿಕೊಳ್ಳುವುದರಲ್ಲಿ ಯಾವುದೇ ಸಮರ್ಥನೆಯಿರುವುದಿಲ್ಲ, ಹಾಗೆ ಸೇರಿಸಿಕೊಳ್ಳುವುದು, ನಿವೃತ್ತಿ ವೇತನ ನಿಯಮಗಳಲ್ಲಿ ಒಳಗೊಳ್ಳದ ಸೇವೆಯನ್ನು ಪರಿಗಣನೆಗೆ ತೆಗೆದುಕೊಳ್ಳುವಂತೆ ಆಗುತ್ತದೆ ಮತ್ತು ಅದು ಸರ್ಕಾರವು ಉದ್ದೇಶಿಸದೇ ಇದ್ದ ಸಹಾಯಾನುದಾನಕ್ಕೆ ಸೇರಿಸಿಕೊಳುವುದು, ಪೂರ್ವಾನ್ವಯ ಪರಿಣಾಮವನ್ನು ನೀಡಿದಂತೆಯೂ ಆಗುವುದರಿಂದ;

ಮತ್ತು, ಖಾಸಗಿ ಅನುದಾನಿತ ಶೈಕ್ಷಣಿಕ ಸಂಸ್ಥೆಗಳ ಬೋಧಕ ಮತ್ತು ಬೋಧಕೇತರ ಸಿಬ್ಬಂದಿಯು ಅನುದಾನರಹಿತ ಅವಧಿಯಲ್ಲಿ ಗಳಿಸಿದ ವೇತನ ಬಡ್ತಿಗಳನ್ನು, ಸಹಾಯಾನುದಾನವನ್ನು ಬಿಡುಗಡೆಗೊಳಿಸುವುದಕ್ಕೆ ಹಾಗೂ ಸ್ವಯಂ ಚಾಲಿತ ಮುಂಬಡ್ತಿ ಯೋಜನೆಗಾಗಿ, ನೌಕರಿ ಮುಂಬಡ್ತಿ ಯೋಜನೆಗಾಗಿ ಮತ್ತು ನಿವೃತ್ತಿ ವೇತನದ ಉದ್ದೇಶಕ್ಕಾಗಿ ಪರಿಗಣನೆಗೆ ತೆಗೆದುಕೊಂಡಲ್ಲಿ, ಅದು ರಾಜ್ಯದ ಬೊಕ್ಕಸಕ್ಕೆ ಬಹುದೊಡ್ಡ ಆರ್ಥಿಕ ಪರಿಣಾಮವನ್ನು ಒಳಗೊಂಡಿರುವುದರಿಂದ;

ಮತ್ತು, ಇಲ್ಲಿ ಇನ್ನು ಮುಂದೆ ಕಂಡು ಬರುವ ಉದ್ದೇಶಗಳಿಗಾಗಿ, ಸರ್ಕಾರವು ವಿಷಯವನ್ನು ಪುನರಾವಲೋಕನೆ ಮಾಡಿ, ಸಹಾಯಾನುದಾನಕ್ಕೆ ಸೇರುವ ದಿನಾಂಕದಂದು ರಾಜ್ಯದಲ್ಲಿನ ಖಾಸಗಿ ಶಿಕ್ಷಣ ಸಂಸ್ಥೆಗಳಲ್ಲಿ ಕಾರ್ಯನಿರ್ವಹಿಸುತ್ತಿರುವ ಸಿಬ್ಬಂದಿಗಳ ಕಾಲಿಕ ವೇತನ ಶ್ರೇಣಿಯ ಕನಿಷ್ಠ ವೇತನದಲ್ಲಿ ಸಹಾಯಾನುದಾನವನ್ನು ವಿಸ್ತರಿಸುವ ಮತ್ತು ಹುದ್ದೆಗಳಿಗೆ ಮಂಜೂರಾದ ಸಹಾಯಾನುದಾನದಷ್ಟರಮಟ್ಟಿಗೆ ಮುಂಬಡ್ತಿ ಯೋಜನೆಗಳ ಮೇಲೆ ರಾಜ್ಯದ ಹೊಣೆಗಾರಿಕೆಯನ್ನು ಮಿತಿಗೊಳಿಸುವ ಮತ್ತು ಅದಕ್ಕೆ ಸಂಬಂಧಿಸಿದ ಹಾಗೂ ಅದಕ್ಕೆ ಪ್ರಾಸಂಗಿಕವಾದ ಇತರ ವಿಷಯಗಳ ಸಂಬಂಧದಲ್ಲಿ ನಿರ್ಧಾರವನ್ನು ಕೈಗೊಳ್ಳಲಾಯಿತು.

ಇದು ಭಾರತ ಗಣರಾಜ್ಯದ ಅರವತ್ತೈದನೇ ವರ್ಷದಲ್ಲಿ ಕರ್ನಾಟಕ ವಿಧಾನಮಂಡಲದಿಂದ ಈ ಮುಂದಿನಂತೆ ಅಧಿನಿಯಮಿತವಾಗತಕ್ಕದ್ದು, ಎಂದರೆ:-

**1. ಸಂಕ್ಷಿಪ್ತ ಹೆಸರು ಮತ್ತು ಪ್ರಾರಂಭ.–** (1) ಈ ಅಧಿನಿಯಮವನ್ನು ಕರ್ನಾಟಕ ಖಾಸಗಿ ಅನುದಾನಿತ ಶೈಕ್ಷಣಿಕ ಸಂಸ್ಥೆಗಳ ಸಿಬ್ಬಂದಿಗಳ (ವೇತನ, ನಿವೃತ್ತಿ ವೇತನ ಮತ್ತು ಇತರ ಸೌಲಭ್ಯಗಳ ನಿಯಂತ್ರಣ) ಅಧಿನಿಯಮ, 2014 ಎಂದು ಕರೆಯತಕ್ಕದ್ದು.

(2) ಇದು 1995ರ ಜೂನ್ 1ರಿಂದ ಜಾರಿಗೆ ಬಂದಿರುವುದಾಗಿ ಭಾವಿಸತಕ್ಕದ್ದು.

**2. ಪರಿಭಾಷೆಗಳು.–** (1) ಈ ಅಧಿನಿಯಮದಲ್ಲಿ ಸಂದರ್ಭವು ಅನ್ಯಥಾ ಅಗತ್ಯ ಪಡಿಸಿದ ಹೊರತು,–

(ಎ) "ಸ್ವಯಂಚಾಲಿತ ಅಥವಾ ಕಾಲಬದ್ಧ ಮುಂಬಡ್ತಿ ಯೋಜನೆ (Automatic or Time Bound Advancement Scheme)" ಎಂದರೆ, ಒಂದು ಹುದ್ದೆಯಲ್ಲಿ ನಿರ್ದಿಷ್ಟ ಸೇವಾವಧಿಯನ್ನು ಪೂರ್ಣಗೊಳಿಸಿದ ತರುವಾಯ ಶೈಕ್ಷಣಿಕ ಸಂಸ್ಥೆಯೊಂದರ ಸಿಬ್ಬಂದಿಗೆ ಮಂಜೂರು ಮಾಡುವ ಉನ್ನತ ವೇತನ ಶ್ರೇಣಿಗಳು;

(ಬಿ) "ನೌಕರಿ ಮುಂಬಡ್ತಿ ಯೋಜನೆ (Career Advancement Scheme)" ಎಂದರೆ, ಕಾಲೇಜು ಅಥವಾ ಬಿ.ಎಡ್.(B.Ed) ಕಾಲೇಜು ಅಥವಾ ತಾಂತ್ರಿಕ ಸಂಸ್ಥೆಗಳಲ್ಲಿ ಕಾರ್ಯ ನಿರ್ವಹಿಸುತ್ತಿರುವ ಉಪನ್ಯಾಸಕರು, ಗ್ರಂಥಪಾಲರು ಮತ್ತು ದೈಹಿಕ ಶಿಕ್ಷಣ ನಿರ್ದೇಶಕರಿಗೆ ಒಂದು ಹುದ್ದೆಯಲ್ಲಿ ನಿರ್ದಿಷ್ಟ ಸೇವಾವಧಿಯನ್ನು ಪೂರೈಸಿದ ತರುವಾಯ ಮಂಜೂರು ಮಾಡುವ ಉನ್ನತ ವೇತನ ಶ್ರೇಣಿಗಳು;

(ಸಿ) "ಶೈಕ್ಷಣಿಕ ಸಂಸ್ಥೆ" ಎಂದರೆ, ಯಾವುದೇ ವ್ಯಕ್ತಿಗಳ ನಿಕಾಯ ಸ್ಥಾಪಿಸಿ ನಿಯಂತ್ರಿಸುತ್ತಿರುವ ಅಥವಾ ನಿರ್ವಹಿಸುತ್ತಿರುವ ಮತ್ತು ರಾಜ್ಯ ಸರ್ಕಾರವು ಮಾನ್ಯತೆ ನೀಡಿರುವ ಮತ್ತು ಎಲ್ಲೆಲ್ಲಿ ಅನ್ವಯವಾಗುವುದೋ ಅಲ್ಲಿ ಯಾವುದೇ ವಿಶ್ವವಿದ್ಯಾಲಯಕ್ಕೆ ಸಂಯೋಜನೆಗೊಂಡಿರುವ ಪದವಿ, ಡಿಪ್ಲೋಮೊ ಅಥವಾ ಸರ್ಟಿಫಿಕೇಟ್ ಕೋರ್ಸುಗಳ ಶಿಕ್ಷಣವನ್ನು ನೀಡುವ ಕಾಲೇಜುಗಳು ಅಥವಾ ತಾಂತ್ರಿಕ ಸಂಸ್ಥೆಗಳು ಅಥವಾ ಬಿ.ಎಡ್ ಕಾಲೇಜುಗಳು ಒಳಗೊಂಡಂತೆ ಪ್ರಾಥಮಿಕ, ಪ್ರೌಢ, ಪದವಿ–ಪೂರ್ವ ಕಾಲೇಜುಗಳು, ಶಿಕ್ಷಕರ ತರಬೇತಿ ಸಂಸ್ಥೆಗಳಲ್ಲಿ ವಿವಿಧ ಹಂತಗಳಲ್ಲಿ ಶಿಕ್ಷಣವನ್ನು ನೀಡುತ್ತಿರುವ ಶೈಕ್ಷಣಿಕ ಸಂಸ್ಥೆಗಳು;

(ಡಿ) "ಸಿಬ್ಬಂದಿ" ಎಂದರೆ, ಶೈಕ್ಷಣಿಕ ಸಂಸ್ಥೆಯ ಒಬ್ಬ ಸಿಬ್ಬಂದಿ;

(ಇ) "ಸರ್ಕಾರ" ಎಂದರೆ, ಕರ್ನಾಟಕ ಸರ್ಕಾರ;

(ಎಫ್) "ಸಹಾಯಾನುದಾನ" ಎಂದರೆ, ಖಾಸಗಿ ಶೈಕ್ಷಣಿಕ ಸಂಸ್ಥೆಯಲ್ಲಿ ಯಾವುದೇ ಹುದ್ದೆಗಳಿಗೆ ರಾಜ್ಯ ನಿಧಿಯಿಂದ ವೇತನ ಅನುದಾನ ಎಂದು ಸಂದಾಯ ಮಾಡುವ ಹಣದ ಯಾವುದೇ ಮೊತ್ತ; ಮತ್ತು

(ಜಿ) "ಖಾಸಗಿ ಅನುದಾನಿತ ಶೈಕ್ಷಣಿಕ ಸಂಸ್ಥೆ" ಎಂದರೆ, ರಾಜ್ಯ ಸರ್ಕಾರದಿಂದ ಸಹಾಯಾನುದಾನವನ್ನು ಸ್ವೀಕರಿಸುವ ಶೈಕ್ಷಣಿಕ ಸಂಸ್ಥೆ.

(2) ಈ ಅಧಿನಿಯಮದಲ್ಲಿ ಬಳಸಲಾದ ಆದರೆ ಪರಿಭಾಷಿಸಿಲ್ಲದ ಇತರ ಪದಗಳು ಮತ್ತು ಪದಾವಳಿಗಳು ಕರ್ನಾಟಕ ಶಿಕ್ಷಣ ಅಧಿನಿಯಮ, 1983ರಲ್ಲಿ (1995ರ ಕರ್ನಾಟಕ ಅಧಿನಿಯಮ 1) ಇದರಲ್ಲಿ ಅವುಗಳಿಗೆ ಗೊತ್ತುಪಡಿಸಿದ ಅದೇ ಅರ್ಥವನ್ನು ಹೊಂದಿರತಕ್ಕದ್ದು.

**3. ಕಾಲಿಕ ವೇತನ ಶ್ರೇಣಿಯಲ್ಲಿ ಕನಿಷ್ಠ ಸಹಾಯಾನುದಾನದ, ಕಾಲಬದ್ಧ ಮುಂಬಡ್ತಿಯ, ನೌಕರಿ ಮುಂಬಡ್ತಿಯ ಮಂಜೂರಾತಿ ಮತ್ತು ಅನುದಾನರಹಿತ ಅವಧಿಯಲ್ಲಿ ಸಲ್ಲಿಸಿದ ಸೇವೆಯನ್ನು ಅರ್ಹತಾದಾಯಕ ವರ್ಷಗಳೆಂದು ಲೆಕ್ಕಕ್ಕೆ ತೆಗೆದುಕೊಳ್ಳದೇ ನಿವೃತ್ತಿ ಸೌಲಭ್ಯಗಳ ನಿರ್ಧಾರ ಹಾಗೂ ಕ್ಲೇಮುಗಳು ಯಾವುದಾದರೂ ಇದ್ದಲ್ಲಿ, ಅವುಗಳನ್ನು ರದ್ದುಗೊಳಿಸುವುದು.–** (1) ಕರ್ನಾಟಕ ಶಿಕ್ಷಣ ಅಧಿನಿಯಮ, 1983ರಲ್ಲಿ ಸರ್ಕಾರದ ಯಾವುದೇ ಆದೇಶ ಅಥವಾ ಯಾವುದೇ ಶೈಕ್ಷಣಿಕ ಸಂಸ್ಥೆಯ ಸಿಬ್ಬಂದಿಗಳ ಸೇವಾ ಷರತ್ತುಗಳ ನಿಯಮಗಳು ಅಥವಾ ಮೇಲಿನ ನೌಕರ ವರ್ಗಕ್ಕೆ ಸಹಾಯಾನುದಾನವನ್ನು ನಿಯಂತ್ರಿಸುತ್ತಿರುವ ಯಾವುದೇ ಇತರ ಕಾನೂನು ಅಥವಾ ಯಾವುದೇ ನ್ಯಾಯಾಲಯ ಅಥವಾ ನ್ಯಾಯಾಧಿಕರಣ ಅಥವಾ ಪ್ರಾಧಿಕಾರದ ಯಾವುದೇ ತೀರ್ಪು, ಡಿಕ್ರಿ ಅಥವಾ ಆದೇಶದಲ್ಲಿ ಏನೇ ಇದ್ದರೂ, ಖಾಸಗಿ ಅನುದಾನಿತ ಶೈಕ್ಷಣಿಕ ಸಂಸ್ಥೆಯ ಸಿಬ್ಬಂದಿಯು ಹೊಂದಿದ ಹುದ್ದೆಗೆ ಮಂಜೂರಾಗಬಹುದಾದ ಸಹಾಯಾನುದಾನವನ್ನು, ಸಹಾಯಾನುದಾನಕ್ಕೆ ಸೇರಿಸಲಾದ ದಿನಾಂಕದಿಂದ ಹುದ್ದೆಯ ಕಾಲಿಕ ವೇತನ ಶ್ರೇಣಿಯ ಕನಿಷ್ಠ ವೇತನದಲ್ಲಿ ನಿಗದಿಮಾಡತಕ್ಕದ್ದು ಮತ್ತು ಲೆಕ್ಕಹಾಕತಕ್ಕದ್ದು ಹಾಗೂ ವೇತನ, ರಜೆ, ಜ್ಯೇಷ್ಠತೆ ಮತ್ತು ನಿವೃತ್ತಿ ವೇತನ ಉದ್ದೇಶಕ್ಕಾಗಿ, ಸಹಾಯಾನುದಾನಕ್ಕೆ ಸೇರುವುದಕ್ಕೆ ಮೊದಲು ಸಲ್ಲಿಸಿದ ಸೇವೆಯನ್ನು ಲೆಕ್ಕಹಾಕತಕ್ಕದ್ದಲ್ಲ ಮತ್ತು ನಿವೃತ್ತಿ ವೇತನಗಳ ಸೌಲಭ್ಯಗಳನ್ನು ಅನುದಾನರಹಿತ ಅವಧಿಯಲ್ಲಿ ಸಲ್ಲಿಸಿದ ಸೇವೆಯನ್ನು ಅರ್ಹತಾದಾಯಕ ವರ್ಷಗಳೆಂದು ಲೆಕ್ಕಕ್ಕೆ ತೆಗೆದುಕೊಳ್ಳದೆ ನಿರ್ಧರಿಸತಕ್ಕದ್ದು ಹಾಗೂ ಅಂಥ ಸಿಬ್ಬಂದಿಗೆ, ಸ್ವಯಂಚಾಲಿತ ಮುಂಬಡ್ತಿ ಯೋಜನೆ ಮತ್ತು ನೌಕರಿ ಮುಂಬಡ್ತಿ ಯೋಜನೆಯ ವಿಸ್ತರಣೆಯು, ಯಾವುದಾದರೂ ಇದ್ದಲ್ಲಿ, ಅದರ ಸಂಬಂಧದಲ್ಲಿನ ಸರ್ಕಾರದ ಆರ್ಥಿಕ ಹೊಣೆಗಾರಿಕೆಯು, ಆ ಹುದ್ದೆಗೆ ಮಂಜೂರಾದ ಸಹಾಯಾನುದಾನದ ಅಗತ್ಯ ಪರಿಮಾಣಕ್ಕೆ ಅನುಸಾರವಾಗಿ ಮಿತಿಗೊಳ್ಳತಕ್ಕದ್ದು.

(2) ಸರ್ಕಾರದ ಯಾವುದೇ ಆದೇಶ ಅಥವಾ ಯಾವುದೇ ನ್ಯಾಯಾಲಯ ಅಥವಾ ನ್ಯಾಯಾಧಿಕರಣದ ಯಾವುದೇ ತೀರ್ಪಿನಲ್ಲಿ ಏನೇ ಇದ್ದರೂ, ಸಹಾಯಾನುದಾನಕ್ಕೆ ಹುದ್ದೆಯು ಸೇರಿರುವ ದಿನಾಂಕಕ್ಕೆ ಮೊದಲು ಪಡೆದ ವೇತನ ಬಡ್ತಿಗಳನ್ನು ಲೆಕ್ಕ ಹಾಕುವುದರ ಮೂಲಕ ಸಹಾಯಾನುದಾನವನ್ನು ಬಿಡುಗಡೆಗೊಳಿಸುವುದಕ್ಕಾಗಿ ಮತ್ತು ಅನುದಾನರಹಿತ ಅವಧಿಗೆ ಸಲ್ಲಿಸಿದ ಸೇವೆಯನ್ನು ಅರ್ಹತಾದಾಯಕ ವರ್ಷಗಳೆಂದು ಲೆಕ್ಕಹಾಕುವ ಮೂಲಕ ನಿವೃತ್ತಿ

